

ಹಂಪಿ ವಿಶ್ವವಿದ್ಯಾಯಲಕ್ಕೆ ಸಲ್ಲಿಸಿದ ಎಂ.ಫಿಲ್. ಪದವಿಯ ಸಂಪ್ರಬಂಧ

# "ಮೊಗಳ್ಳಿ ಗಣೇಶ್ ಅವರ ಸಣ್ಣ ಕಥೆಗಳಲ್ಲಿ ಜಾನಪದ ಪ್ರೇರಣೆ"


ಸಂಶೋಧಕರು

**ರೇಖಾ. ಜೆ.ಎಲ್.**

ಮಾರ್ಗದರ್ಶಕರು.

**ಡಾ॥ ಡಿ.ಲಿಂಗಯ್ಯ**

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ

ಎಂ.ವಿ.ಸೀ.ಸ್ನಾತಕೋತ್ತರ ಸಂಶೋಧನ ಕೇಂದ್ರ

ಬೆಂಗಳೂರು.





ಎಂ.ವಿ.ಸೀ.ಸ್ನಾತಕೋತ್ತರ ಸಂಶೋಧನ ಕೇಂದ್ರ

ಬಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನ

ಬೆಂಗಳೂರು.

೨೦೦೯-೨೦೧೦



ಹಂಪಿ ವಿಶ್ವವಿದ್ಯಾಯಲಕ್ಕೆ ಸಲ್ಲಿಸಿದ ಎಂ.ಫಿಲ್. ಪದವಿಯ ಸಂಪ್ರಬಂಧ

# **"ಮೊಗಳ್ಳಿ ಗಣೇಶ್ ಅವರ ಸಣ್ಣ ಕಥೆಗಳಲ್ಲಿ ಜಾನಪದ ಪ್ರೇರಣೆ"**

ಸಂಶೋಧಕರು

**ರೇಖಾ. ಜೆ.ಎಲ್.**

ಮಾರ್ಗದರ್ಶಕರು.

ಪ್ರೊ: **ಡಿ.ಲಿಂಗಯ್ಯ.**

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ

ಎಂ.ವಿ.ಸೀ.ಸ್ನಾತಕೋತ್ತರ ಸಂಶೋಧನ ಕೇಂದ್ರ

ಬೆಂಗಳೂರು.



ಎಂ.ವಿ.ಸೀ.ಸ್ನಾತಕೋತ್ತರ ಸಂಶೋಧನ ಕೇಂದ್ರ

ಬಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನ

ಬೆಂಗಳೂರು.

೨೦೦೯-೨೦೧೦

# ಮಾರ್ಗದರ್ಶಕರ ದೃಢೀಕರಣ ಪತ್ರ

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ ಬೆಂಗಳೂರು, ಎಂ.ವಿ.ಸೀ.ಸ್ನಾತಕೋತ್ತರ ಸಂಶೋಧನ ಕೇಂದ್ರದ ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ೨೦೦೯-೧೦ರ ಸಾಲಿನ ಎಂ.ಫಿಲ್. ಪದವಿಗಾಗಿ "ಮೊಗಳ್ಳಿ ಗಣೇಶ್ ಅವರ ಸಣ್ಣ ಕಥೆಗಳಲ್ಲಿ ಜಾನಪದ ಪ್ರೇರಣೆ" ಎಂಬ ಸಂಪ್ರಬಂಧವನ್ನು ರೇಖಾ.ಜೆ.ಎಲ್. ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ.

ಈ ಸಂಪ್ರಬಂಧ ವಿದ್ಯಾರ್ಥಿಯ ಸ್ವಂತ ಬರವಣಿಗೆ ಆಗಿದ್ದು ಇದರ ಯಾವುದೇ ಭಾಗವನ್ನು ಈ ವರೆಗೆ ಬೇರೆಲ್ಲೂ ಪ್ರಕಟಪಡಿಸಿಲ್ಲ ಮತ್ತು ಬೇರೆ ಯಾವುದೇ ಪದವಿಗಾಗಿ ಸಲ್ಲಿಸಿಲ್ಲ ಎಂದು ಈ ಮೂಲಕ ದೃಢೀಕರಿಸುತ್ತಾನೆ.

ದಿನಾಂಕ : 8-9-2010.

ಸ್ಥಳ : ಬೆಂಗಳೂರು

ಪ್ರೊ. ಡಿ.ಲಿಂಗಯ್ಯ
ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ
ಎಂ.ವಿ.ಸೀ.ಸ್ನಾತಕೋತ್ತರ ಸಂಶೋಧನ ಕೇಂದ್ರ
ಬೆಂಗಳೂರು.

# ಸಂದಶೋಧಕರ ಪ್ರಮಾಣ ಪತ್ರ

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ ಬೆಂಗಳೂರು, ಎಂ.ವಿ.ಸೀ.ಸ್ನಾತಕೋತ್ತರ ಸಂಶೋಧನ ಕೇಂದ್ರದ ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ೨೦೦೯-೧೦ರ ಸಾಲಿನ ಎಂ.ಫಿಲ್. ಪದವಿಗಾಗಿ "ಮೊಗಳ್ಳಿ ಗಣೇಶ್ ಅವರ ಸಣ್ಣ ಕಥೆಗಳಲ್ಲಿ ಜಾನಪದ ಪ್ರೇರಣೆ" ಎಂಬ ಸಂಪ್ರಬಂಧವನ್ನು ಪ್ರೊ.ಡಿ.ಲಿಂಗಯ್ಯ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ.

ಈ ಸಂಪ್ರಬಂಧ ನನ್ನ ಸ್ವಂತ ಬರವಣಿಗೆ ಆಗಿದ್ದು ಇದರ ಯಾವುದೇ ಭಾಗವನ್ನು ಈ ವರೆಗೆ ಬೇರೆಲ್ಲೂ ಪ್ರಕಟಪಡಿಸಿಲ್ಲ ಮತ್ತು ಬೇರೆ ಯಾವುದೇ ಪದವಿಗಾಗಿ ಸಲ್ಲಿಸಿಲ್ಲ ಎಂದು ಈ ಮೂಲಕ ದೃಢೀಕರಿಸುತ್ತಾನೆ.

ರೇಖಾ ಜೆ.ಎಲ್.

ದಿನಾಂಕ : 8-9-2010

ರೇಖಾ.ಜೆ.ಎಲ್

ಸ್ಥಳ : ಬೆಂಗಳೂರು

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ

ಎಂ.ವಿ.ಸೀ.ಸ್ನಾತಕೋತ್ತರ ಸಂಶೋಧನ ಕೇಂದ್ರ

ಬೆಂಗಳೂರು.

# ಮೊಗಳ್ಳಿ ಗಣೇಶ್ ಅವರ ಸಣ್ಣಕಥೆಗಳಲ್ಲಿ ಜಾನಪದ ಪ್ರೇರಣೆ

ಪರಿವಿಡಿ

# ಅಧ್ಯಾಯ ಒಂದು

## ಪ್ರವೇಶ, ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ.

# ಅಧ್ಯಾಯ ಒಂದು

## ಪ್ರವೇಶ ; ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ.

### ಪ್ರವೇಶ

ಜನಪ್ರಿಯತೆಯ ಮಾನದಂಡದಿಂದ ಅಳೆಯುವುದಾದರೆ ಕಾದಂಬರಿಯ ಅನಂತರದ ಸ್ಥಾನ ಸಣ್ಣಕಥಾಪ್ರಕಾರಕ್ಕೆ ಲಭಿಸುತ್ತದೆ. ಮನುಷ್ಯನಿಗೆ ಕಥೆಯ ಬಗ್ಗೆ ಇರುವ ಸಹಜ ಕುತೂಹಲ ಒಂದು ಕಾರಣವಾದರೆ ಸಣ್ಣಕಥೆ ಕಾದಂಬರಿಯಂತೆ ಯೂರೋಪ್, ಅದರಲ್ಲೂ ಇಂಗ್ಲೆಂಡಿನಿಂದ ಹೊಸದಾಗಿ ಬಂದ ಸಾಹಿತ್ಯ ಪ್ರಕಾರ ಎಂಬುದು ಮತ್ತೊಂದು ಕಾರಣವೆನ್ನಬಹುದು. ಕನ್ನಡದ "ಸಣ್ಣಕಥೆ" ಎಂಬ ಶಬ್ದವೇ ಇಂಗ್ಲಿಷಿನ " Short story" ಎಂಬುದರ ನೇರ ಭಾಷಾಂತರವಾಗಿದೆ. ಹಾಗಿದ್ದರೂ ಸಣ್ಣಕಥೆಗೆ ಭಾರತೀಯ ಪರಂಪರೆಯಲ್ಲಿ ನೆಲೆಯಿದೆ ಎಂಬುದನ್ನು ಮರೆಯಲಾಗದು. ಹತ್ತನೇ ಶತಮಾನದ ಶಿವಕೋಟ್ಯಾಚಾರ್ಯನ 'ವಡ್ಡಾರಾಧನೆ' ಕನ್ನಡದ ಅತ್ಯಂತ ಪ್ರಾಚೀನ ಗದ್ಯಕಥೆಗಳ ಸಂಕಲನ ದುರ್ಗಸಿಂಹನ 'ಪಂಚತಂತ್ರ' (ಹನ್ನೊಂದನೇ ಶತಮಾನ), ನಯಸೇನನ ಧರ್ಮಾಮೃತ (ಹನ್ನೆರಡನೇ ಶತಮಾನ), 'ಕಥಾಸರಿತ್ಸಾಗರ', 'ಜನಪದ ಕಥೆಗಳು' ಮುಂತಾದವು ಭಾರತೀಯ ನೆಲೆಯಿಂದ ಹೊರಟ ಕೃತಿಗಳೇ ಆಗಿವೆ. ಆಧುನಿಕ ಸಣ್ಣಕಥೆ ವಸ್ತು ಮತ್ತು ತಂತ್ರಗಳ ದೃಷ್ಟಿಯಿಂದ ಈ ಗದ್ಯಕಥೆಗಳಿಗಿಂತ ಭಿನ್ನವಾಗಿದ್ದು, ಪಶ್ಚಿಮದ ಸಾಹಿತ್ಯದ ಪ್ರೇರಣೆಯಿಂದ ರೂಪುಗೊಂಡ ಸಾಹಿತ್ಯದ ಪ್ರಕಾರವಾಗಿದೆ.

ಇಂದಿನ ಮಾಧ್ಯಮಗಳ ಬೆಳವಣಿಗೆಯಲ್ಲಿ, ಅದರಲ್ಲೂ ದೃಶ್ಯ ಮಾಧ್ಯಮಗಳ ಪ್ರಗತಿಯ ಸಂದರ್ಭದಲ್ಲೂ ಸಣ್ಣಕಥೆ ತನ್ನ ಜನಪ್ರಿಯತೆಯನ್ನು, ಅಸ್ತಿತ್ವವನ್ನು ಬಿಟ್ಟುಕೊಟ್ಟಿಲ್ಲ. ದಿನಪತ್ರಿಕೆಗಳಲ್ಲಿ ವಾರಪತ್ರಿಕೆಗಳಲ್ಲಿ ಮಾಸಪತ್ರಿಕೆಗಳಲ್ಲಿ ಸಣ್ಣಕಥೆಗಳು ನಿರಂತರವಾಗಿ ಪ್ರಕಟಗೊಂಡಿವೆ ಹಾಗೂ ಪ್ರಕಟಗೊಳ್ಳುತ್ತಿವೆ. ಬಹುಪಾಲು ಟಿ.ವಿ. ಧಾರವಾಹಿಗಳು ಕೂಡ ಸಣ್ಣಕಥೆಯ ವಿಸ್ತೃತ ರೂಪಗಳೇ ಆಗಿರುವುದನ್ನು ಕಾಣಬಹುದು.

ನವ್ಯೋತ್ತರದ ಸಣ್ಣಕಥಾ ಕ್ಷೇತ್ರಕ್ಕೆ ತಮ್ಮದೇ ಆದಂತಹ ಕಾಣಿಕೆಗಳನ್ನು ನೀಡಿದವರಲ್ಲಿ ಮೊಗಳ್ಳಿ ಗಣೇಶ್ ಅವರು ಒಬ್ಬರು. ಪರಂಪರೆಯ ಕೇವಲ ಅನುಕರಣೆಯನ್ನು ಬಿಟ್ಟು ಹೊಸ

ಬಗೆಯ ಸೃಜನಶೀಲ ರಚನೆಯಲ್ಲಿ ತೊಡಗಿದವರ ಸಾಲಿಗೆ ಮೊಗಳ್ಳಿ ಗಣೇಶ್ ಅವರು ಸಹ ಸೇರುತ್ತಾರೆ. ಮೊಗಳ್ಳಿ ಅವರು ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ತಮ್ಮದೇ ಆದ ಕೊಡುಗೆಗಳನ್ನು ನೀಡಿದ್ದಾರೆ. ಮೊಗಳ್ಳಿ ಗಣೇಶ್ ಅವರ ಕಥೆಗಳು ಕೆಳಜಾತಿಯ ಮತ್ತು ಅಸ್ಪೃಶ್ಯ ಜನಾಂಗದ ಸುಖ ದುಃಖಗಳನ್ನು ನಂಬಿಕೆ ಆಚರಣೆಗಳನ್ನು ಸಮರ್ಥವಾಗಿ ಚಿತ್ರಿಸುತ್ತವೆ. ಇವರ ಕಥೆಗಳಲ್ಲಿ ಶೋಷಣೆಯ ವಿವಿಧ ಮುಖಗಳನ್ನು ಕಾಣುತ್ತೇವೆ. ಹಳ್ಳಿಗಳ ಬದಲಾವಣೆಗಳು ಮೊಗಳ್ಳಿಯವರ ಕಥೆಗಳಲ್ಲಿ ಸ್ಪಷ್ಟವಾಗಿ ಕಾಣುತ್ತವೆ. ಇವರ ಕಥೆಗಳಲ್ಲಿ ಅಸ್ಪೃಶ್ಯರ ಜೀವನ ಮತ್ತು ಜನಪದ ನಂಬಿಕೆಯೊಂದರ ಸಮಸ್ಯೆಯನ್ನು ವಿಶ್ಲೇಷಣೆಗೆ, ಶೋಧನೆಗೆ ಒಳಗು ಮಾಡುವುದನ್ನು ಗುರುತಿಸಬಹುದು. ಹೀಗಾಗಿ ಇವರ ಕಥೆಗಳು ದಲಿತ ಸಾಮುದಾಯಿಕ ಎಲ್ಲೆಯಲ್ಲಿ ಬಿಚ್ಚಿಕೊಳ್ಳುತ್ತವೆ.

## ಅಧ್ಯಯನದ ಉದ್ದೇಶ.

ಶಿಷ್ಟ ಸಾಹಿತ್ಯಕ್ಕು ಮತ್ತು ಜಾನಪದಕ್ಕು ಇರುವ ಸಂಬಂಧ ಹೊಕ್ಕಳ ಬಳ್ಳಿಯಷ್ಟು ಗಾಢವಾದದ್ದು. ಯಾವುದೇ ಸಾಹಿತ್ಯ ಕೃತಿಯು ಹುಟ್ಟಿದರೂ ಜನಪದೀಯ ಅಂಶಗಳು ಮಿನುಗುವುದನ್ನು ಗಮನಿಸಬಹುದು. ಶಿಷ್ಟ ಸಾಹಿತ್ಯವು ಬಹುಪಾಲು ಜನಪದದ ಪ್ರಭಾವಕ್ಕೆ ಒಳಗಾಗಿಯೇ ರಚನೆಯಾಗುತ್ತದೆ. ಮೊಗಳ್ಳಿ ಗಣೇಶ್‌ರವರ ಕೃತಿಗಳು ಇದರಿಂದ ಹೊರತಾಗಿಲ್ಲ.

ಮೊಗಳ್ಳಿ ಗಣೇಶ್ ಅವರು ಸಂಪ್ರದಾಯದ ದಾರಿಯನ್ನು ಬಿಟ್ಟು ಹೊಸ ದಾರಿಯಲ್ಲಿ ತಮ್ಮ ಕಥೆಗಳನ್ನು ರಚಿಸಿದ್ದಾರೆ. ಜನಪದದ ಕಥೆಗಳನ್ನು ರೂಪಾಂತರಿಸಿ ಆಧುನಿಕ ಕಾಲಕ್ಕೆ ಹೊಂದಾಣಿಕೆಯಾಗುವಂತೆ ಕಥೆಗಳನ್ನು ಹೆಣೆದಿದ್ದಾರೆ. ಅವರ ಕಥೆಗಳಲ್ಲಿ ಬರುವಂತಹ ಪಾತ್ರಗಳು ಜೀವಂತವಾದವುಗಳಾಗಿವೆ. ಮೋಗಳ್ಳಿ ಗಣೇಶ್ ಅವರೆ ತಮ್ಮ "ಬುಗುರಿ" ಕಥಾಸಂಕಲನದ ಅರಿಕೆಯಲ್ಲಿ ಈ ರೀತಿ ಹೇಳಿಕೊಂಡಿದ್ದಾರೆ. "ಇದು ನನ್ನ ಮೊದಲ ಕಥಾಸಂಕಲನ. ಈ ಹೊತ್ತಿನಲ್ಲಿ ನನ್ನ ಮಾತನ್ನು ನಾನು ಹೇಳಿಕೊಳ್ಳಬೇಕೆಂಬ ಒತ್ತಡದಲ್ಲಿ ನೆನಪಾಗುತ್ತಿರುವುದು ನನ್ನ ಅವಮಾನಗಳು ಮಾತ್ರ. ಇಲ್ಲಿನ ಕಥೆಗಳ ಒಳಾಗಿರುವ ಪಾತ್ರ ಘಟನೆ ಆವರಣಗಳೆಲ್ಲ ಈಗಲೂ ನಮ್ಮ ಊರಿನಲ್ಲಿ ಸ್ಥಿತ್ಯಂತರಗಳ ಜೊತೆ ಕಾಲದ ನಡುವೆ ತೇಲುತ್ತಿವೆ. ಅವರೆಲ್ಲ ನನಗೆ ನೆನಪಾಗುತ್ತಾರೆ. ಅವರ ಅವಮಾನಗಳನ್ನು ಅವರವರ ಘನತೆ ಜೀವನ ಪ್ರೀತಿ ಮತ್ತು ಕ್ಷುಲ್ಲಕತೆಗಳನ್ನು ಜೊತೆಯಲೇ ಉಂಡು ಬೆಳೆದವ ನಾನು ಹಾಗಾಗಿ

ಅವರನ್ನೆಲ್ಲ ಇಲ್ಲಿ ನೆನಯುತ್ತೇನೆ. ಈ ಕಥೆಗಳನ್ನು ಬರೆದದ್ದು ಕೂಡ ಅವರ ಮತ್ತು ನನ್ನ ಅವಮಾನಗಳ ಭಾರವನ್ನು ಇಳಿಸಿಕೊಳ್ಳಲು ಅಷ್ಟೆ."(ಮೊಗಳ್ಳಿ ಗಣೇಶ-ಬುಗುರಿ-ಅರಿಕೆ)

ಮೊಗಳ್ಳಿಯವರ ತಮ್ಮ ಬದುಕಿನಲ್ಲಿ ಅನುಭವಿಸಿದ ಅನುಭವಗಳನ್ನು ಕಥೆಯನ್ನಾಗಿಸುವ ಪ್ರಯತ್ನವನ್ನು ಹೇಗೆ ಮಾಡಿದ್ದಾರೆ. ಜಾನಪದೀಯ ಕಥೆಗಳನ್ನು ಆನ್ವಯಿಕಗೊಳಿಸಿಕೊಂಡು ತಮ್ಮದೇ ಆದಂತಹ ಹೊಸ ಮಾದರಿಯನ್ನು ಸೃಷ್ಟಿಸಿರುವುದನ್ನು, ಜಾನಪದಿಯ ಕಥೆಗಳನ್ನು ಬದಲಾಯಿಸಿಕೊಂಡು ಆಧುನಿಕ ಕಾಲಕ್ಕೆ ತಕ್ಕಂತೆ ಕಥೆಗಳನ್ನು ಹೇಗೆ ಬರೆದಿದ್ದಾರೆ ಎಂಬುದನ್ನು ಶೋಧಿಸಿ ಸಂಕ್ಷಿಪ್ತವಾಗಿ ಹೇಳುವುದೇ ನನ್ನ ಅಧ್ಯಯನದ ಉದ್ದೇಶವಾಗಿದೆ.

ಮೊಗಳ್ಳಿಯವರ ಕಥೆಗಳು ವೈಶಿಷ್ಟ್ಯ ಪೂರ್ಣವು ಹೇಗೆ ಎಂಬುದನ್ನು ವಿವರಣಾತ್ಮಕವಾಗಿ ಮುಂದಿನ ಬೇರೆ ಬೇರೆ ಅಧ್ಯಾಯಗಳಲ್ಲಿ ಚರ್ಚಿಸಲಾಗಿದೆ.

## ಅಧ್ಯಯನದ ವ್ಯಾಪ್ತಿ.

ಮೊಗಳ್ಳಿಯವರು ಕಥನ, ಕಾದಂಬರಿ, ಕಾವ್ಯ, ವಿಮರ್ಶೆ, ಲಲಿತ ಪ್ರಬಂಧ ಮುಂತಾದ ಸಾಹಿತ್ಯ ಪ್ರಕಾರಗಳಲ್ಲಿ ಕೃಷಿಯನ್ನು ಮಾಡಿದ್ದರೂ ಸಹಿತ ನನ್ನ ಅಧ್ಯಯನ "ಮೊಗಳ್ಳಿ ಗಣೇಶ್ ಅವರ ಸಣ್ಣಕಥೆಗಳಲ್ಲಿ ಜಾನಪದ ಪ್ರೇರಣೆ" ಎಂಬ ವಿಷಯ ಆಗಿರುವುದರಿಂದ ಜಾನಪದ ಪ್ರಭಾವಕ್ಕೆ ಒಳಗಾಗಿ ರಚನೆಯಾಗಿರುವ ಕಥೆಗಳನ್ನು ಆಯ್ಕೆ ಮಾಡಿಕೊಂಡಿದ್ದು 'ಬುಗುರಿ', 'ಅತ್ತೆ', 'ಮಣ್ಣು', 'ಭೂಮಿ' ಎಂಬ ಸಂಕಲನಗಳಿಂದ ಸುಮಾರು ೨೦ ಕಥೆಗಳನ್ನು ಮಾತ್ರ ನನ್ನ ಅಧ್ಯಯನದ ವ್ಯಾಪ್ತಿಯಲ್ಲಿ ಸೇರಿಸಿಕೊಳ್ಳಲಾಗಿದೆ.

'ಮೊಗಳ್ಳಿ ಗಣೇಶ್ ಮತ್ತು ದಲಿತ ಸಾಹಿತ್ಯ' ಎಂಬ ಅಧ್ಯಾಯದಲ್ಲಿ ಮೊಗಳ್ಳಿ ಗಣೇಶ್ ಅವರ ಜೀವನ, ಅವರ ಹುಟ್ಟು, ಅವರ ವಿದ್ಯಾಭ್ಯಾಸ, ಸಾಹಿತ್ಯಕ್ಷೇತ್ರದಲ್ಲಿ ಅವರು ಮಾಡಿರುವ ಸಾಧನೆ, ದಲಿತ ಸಾಹಿತ್ಯ ಅದರಲ್ಲೂ ಅದರ ಹುಟ್ಟು ಮತ್ತು ಬೆಳವಣಿಗೆ, ದಲಿತ ಸಾಹಿತ್ಯಕ್ಕೆ ಅವರು ನೀಡಿದ ಕೊಡುಗೆ. ಮೊಗಳ್ಳಿ ಗಣೇಶ್‌ರವರು ದಲಿತ ಸಂವೇದನೆಗೆ ಸ್ಪಂದಿಸಿದ ಬಗೆಗೆ ಹೆಚ್ಚು ಗಮನವನ್ನು ನೀಡಲಾಗಿದೆ.

'ಜಾನಪದ ಹಿನ್ನೆಲೆಯಲ್ಲಿ ಮೊಗಳ್ಳಿ ಗಣೇಶ ಅವರ ಸಣ್ಣಕಥೆಗಳು' ಎಂಬ ಅಧ್ಯಾಯದಲ್ಲಿ ಮೊಗಳ್ಳಿ ಗಣೇಶ್ ಅವರು ತಮ್ಮ ಕಥೆಗಳಲ್ಲಿ ಆಯ್ಕೆ ಮಾಡಿಕೊಂಡಿರುವ ವಸ್ತು, ಒಂದು ಕಥೆಗೂ ಮತ್ತೊಂದು ಕಥೆಗೂ ಇರುವಂತಹ ಭಿನ್ನತೆ ಆಧುನಿಕ ಓದುಗನಿಗೆ

ಹೊಂದಿಕೊಳ್ಳುವಂತೆ ಜನಪದ ಕಥೆಗಳನ್ನು ಮಾರ್ಪಡಿಸಿಕೊಂಡಿರುವ ರೀತಿ, ಗ್ರಾಮೀಣ ಜೀವನದ ಜೊತೆ ನಗರ ಜೀವನವನ್ನು ಸಮ್ಮಿಲನಗೊಳಿಸಿ ಕತೆ ಹೆಣೆದಿರುವ ಬಗೆ, ಕಥೆಯ ಮೈಕಟ್ಟು ಕೆಡದಂತೆ ಬಳಕೆಯಾಗಿರುವ ಭಾಷೆ, ಕಥೆಗಳನ್ನು ರಚಿಸಲು ತಮ್ಮದೇ ಆದಂತಹ ಹೊಸ ಮಾರ್ಗವನ್ನು ಕಂಡುಕೊಂಡು ಆ ಮಾರ್ಗದಲ್ಲಿ ತಮ್ಮ ಕಥೆಗಳನ್ನು ಚಿತ್ರಿಸಿರುವ ಶೈಲಿ, ಕಥೆಯ ಬೆಳವಣಿಗೆಗಾಗಿ ಪಾತ್ರಗಳಿಗೆ ಜೀವತುಂಬಿಸುವ ಸಲುವಾಗಿ ರೂಢಿಸಿಕೊಂಡಂತಹ ತಂತ್ರ ಇವುಗಳನ್ನೂ ಸೋದಹರಣವಾಗಿ ತೋರಿಸಲಾಗಿದೆ.

'ಗ್ರಾಮೀಣ ಬದುಕಿನ ಚಿತ್ರಣ' ಎಂಬ ಅಧ್ಯಾಯದಲ್ಲಿ ಮೊಗಳ್ಳಿ ಗಣೇಶ್‌ರವರು ಕಟ್ಟಿಕೊಂಡಿರುವ ಗ್ರಾಮೀಣ ಪರಿಸರ, ಕಲ್ಪನೆಗೆ ಆಸ್ಪದವನ್ನು ಕೊಡದೆ ವಾಸ್ತವ ಜಗತ್ತನ್ನು ತೋರಿಸಿರುವ ಕ್ರಮವನ್ನು, ಜನಪದ ನಂಬಿಕೆಗಳು ಮತ್ತು ನಡವಳಿಕೆಗಳು, ಹಬ್ಬಗಳು ಮತ್ತು ಆಚರಣೆಗಳು ಕಥೆಯ ಬೆಳವಣಿಗೆಗೆ ಪೂರಕವಾಗಿರುವುದನ್ನು ಇಲ್ಲಿ ಪರಿಚಯಿಸಲಾಗಿದೆ.

'ಜಾನಪದದ ಪ್ರಸ್ತುತತೆ' ಎಂಬ ಅಧ್ಯಾಯದಲ್ಲಿ ಪ್ರಸ್ತುತ ಸಂದರ್ಭದಲ್ಲಿ ಜನಪದದ ಅಗತ್ಯದ ಬಗ್ಗೆ ತಿಳಿಸಲಾಗುತ್ತದೆ. ಜನಪದದ ಅವಶ್ಯಕತೆಯನ್ನು ಹೇಳಲಾಗುತ್ತದೆ.

'ಮೊಗಳ್ಳಿ ಗಣೇಶ್‌ರ ಸಣ್ಣಕಥೆಗಳಲ್ಲಿ ಅವರ ಆಶಯ' ಎಂಬ ಅಧ್ಯಾಯದಲ್ಲಿ ಅವರ ಕಥೆಗಳ ಹಿನ್ನೆಲೆಯಲ್ಲಿ ಅವರ ಆಶಯಗಳನ್ನು ಕುರಿತು ಸಂಕ್ಷಿಪ್ತವಾಗಿ ಹೇಳಲಾಗುತ್ತದೆ.

ಈ ದೀರ್ಘ ಪ್ರಬಂಧದಲ್ಲಿ ಮೊಗಳ್ಳಿ ಗಣೇಶ್‌ರವರ ಸಣ್ಣಕಥೆಗಳಲ್ಲಿ ಮೂಡಿಬಂದಿರುವ ಜಾನಪದ ಪ್ರೇರಣೆಯನ್ನು ಅಧ್ಯಯನ ಮಾಡಿದೆ. ನನ್ನ ಅಧ್ಯಯನದ ಮಿತಿಯಲ್ಲಿ ಮೊಗಳ್ಳಿ ಗಣೇಶ್‌ರವರು ಉಳಿದ ಕಥೆಗಾರರಿಗಿಂತ ಹೇಗೆ ಭಿನ್ನರಾಗಿ ಹೊರಹೊಮ್ಮುತ್ತಾರೆ ಮತ್ತು ಅವರು ಜನಪದ ಕಥೆಗಳನ್ನು ಹಾಗೆ ಆಧುನಿಕ ಬದುಕಿಗೆ ಪರಿವರ್ತಿಸಿ ಕೊಂಡಿದ್ದಾರೆ ಎಂಬುದನ್ನು ಸಂಕ್ಷಿಪ್ತವಾಗಿ ಹೇಳಲಾಗಿದೆ.

ಮೊಗಳ್ಳಿ ಗಣೇಶ್‌ರಂತಹ ದಲಿತ ಲೇಖಕರೊಬ್ಬರ ಸಣ್ಣಕಥೆಗಳನ್ನು ನನ್ನ ಅಧ್ಯಯನದ ವಸ್ತುವನ್ನಾಗಿಸಿ ಕೊಂಡಿರುವುದಕ್ಕೆ ನನಗೆ ತುಂಬಾ ಸಂತೋಷವಾಗಿದೆ. ಆ ಮೂಲಕ ಅತ್ಯುತ್ತಮ ದಲಿತ ಲೇಖಕರೊಬ್ಬರ ಸಣ್ಣಕಥೆಗಳನ್ನು ಸಾಧ್ಯವಾದ ಮಟ್ಟಿಗೆ ಅರಿತು ಕೊಳ್ಳುವುದಕ್ಕೆ ನಾನು ಪ್ರಯತ್ನ ಪಟ್ಟಿದ್ದೇನೆ.

# ಅಧ್ಯಾಯ ಎರಡು

## ಮೊಗಳ್ಳಿ ಗಣೇಶ ಮತ್ತು ದಲಿತ ಸಾಹಿತ್ಯ

# ಅಧ್ಯಾಯ ಎರಡು

## ಮೊಗಳ್ಳಿ ಗಣೇಶ್ ಮತ್ತು ದಲಿತ ಸಾಹಿತ್ಯ

ದಲಿತ ಸಂವೇದನೆ ಸೃಜನಾತ್ಮಕ ಕ್ರಿಯೆಯಲ್ಲಿ ತೊಡಗಿದ್ದು ಸಾಹಿತ್ಯಿಕ ಘಟ್ಟದಲ್ಲಿ ಒಂದು ವಿಶಿಷ್ಟ ಪಾತ್ರ ಹಾಗೂ ಸ್ಥಾನ ಪಡೆದಿದೆ. ಅಭಿವ್ಯಕ್ತಿಯ ಮಾಧ್ಯಮವಾದ ಸೃಜನಾತ್ಮಕ ಪ್ರಕ್ರಿಯೆಯು ಲೋಕಾನುಭವದೊಂದಿಗೆ ವಾಸ್ತವತೆಯನ್ನು ಒಳಗೊಂಡಿದ್ದು, ಭಾಷೆ, ವಸ್ತು, ಶೈಲಿ, ತಂತ್ರಗಳಲ್ಲಿ ವಿಶೇಷತೆಯನ್ನು ಪಡೆದಿರುವುದು ಲೇಖಕರ ಬರಹಗಾರರ ಮನೋಧರ್ಮವನ್ನು ಮನೋಪ್ರವೃತ್ತಿಯ ಅಭಿವ್ಯಕ್ತಿಯ ಕ್ರಿಯೆಯಾಗಿದೆ.

ನವೋದಯ ಕಾವ್ಯ ಸಾಹಿತ್ಯ ಕಂಡಂತೆ ಸೌಂದರ್ಯಾರಾದಕರು ಆಧ್ಯಾತ್ಮಕವಾದಿಗಳು ಈ ಲೋಕ ಮುಖ್ಯವಾಗಿದ್ದಂತೆ ಬೇರೊಂದು – ಆಕಾಶ – ಲೋಕವು ಅಷ್ಟೇ ಮುಖ್ಯ. ಅಂತರ್‌ಮುಖಿಗಳ ವ್ಯಕ್ತಿತ್ವವುಳ್ಳವರು.

ನವೋದಯದ ಹಂತ ಕಳೆದ ಅಂದರೆ ಮುಂದಿನ ಮಾರ್ಗ ಪ್ರೇರಣೆಗೆ ಅನುವು ಮಾಡಿಕೊಟ್ಟ ಹೊಸತನದ ಹೊಸಚೈತನ್ಯದ ಹೊಸ ಸಂಸ್ಕಾರದ ಸಾಹಿತ್ಯಿಕ ಸಂಸ್ಕೃತಿಯು ಬೆಳೆಯಿತು. ಅದನ್ನು ನವ್ಯವೆಂದು ಗುರುತಿಸುತ್ತಾರೆ. 'ವಾಸ್ತವತೆ' ಮುಖ್ಯ, ಕಲ್ಪನೆ, ಭ್ರಮೆ ಇವು ಮನಸ್ಸಿನ ಸ್ಥಿತಿಗಳು ಈ ಲೋಕದ ವ್ಯಾಪಾರ ಪಡೆದದ್ದು. ನೇರವಾಗಿ ಸ್ಪಷ್ಟವಾಗಿ ಹೇಳುವಂತಹವರು ಚರಿತ್ರೆ, ಪುರಾಣ, ಇತಿಹಾಸ ತನ್ನ ಸುತ್ತಮುತ್ತಲಿನ ಸಮಸ್ಯೆಯನ್ನು ಪ್ರತಿನಿಧಿಸುವ ಪ್ರತಿಬಿಂಬಿಸುವ ಸ್ಪಷ್ಟತೆಯನ್ನು ಚಿತ್ರಿಸುವ, ಇತ್ತು ಇದೆ ಇವುಗಳ ಸ್ಪಷ್ಟೀಕರಣ ನೀಡುವ ಪ್ರಯೋಗಶೀಲ ಪ್ರವೃತ್ತಿ ಅಷ್ಟೇಯಲ್ಲ ಸಾಹಿತ್ಯ ಕ್ರಿಯೆಯಲ್ಲಿ ಸಂಪ್ರದಾಯ ವಿರೋಧಿಯ ನೆಲೆಯಲ್ಲಿ ನಿಂತು ಸ್ವತಂತ್ರ ಮತ್ತು ಸ್ವಚ್ಛಂದಗಳ ಬಗ್ಗೆ ಗೆರೆ ಇರದೆ ಆಲೋಚಿಸಿದ ವಿಚಾರವಾದಿಗಳು. ಇದು ನಗರಗಳನ್ನು ಅವಲಂಬಿತಗೊಂಡಿರುವ ಸಾಹಿತ್ಯ ಸೃಷ್ಟಿ ಕ್ರಿಯೆಯಾಗಿರುವುದು.

ಈ ಮುಂದಿನ ಘಟ್ಟಗಳ ಬಗ್ಗೆ ಆಲೋಚಿಸಿದರೆ ಸಾಮಾಜಿಕಧರ್ಮ, ಧಾರ್ಮಿಕಧರ್ಮ, ಮನೋಧರ್ಮಗಳ ಬಗ್ಗೆ ಘರ್ಷಣೆ, ವಾಸ್ತವತೆಯೊಂದಿಗೆ ಹೊಂದಿಕೊಳ್ಳದ, ಪಡೆಯಬೇಕೆಂಬ ಹಠ, ಸಂಪ್ರದಾಯ ವಿರೋಧದ ನೆಲೆ, ಸಮಾನತೆಯ ಚಿಂತನೆ, ಹಕ್ಕು, ಅಧಿಕಾರಗಳ ಬಗ್ಗೆ ಕುರಿತ ಈ ತತ್ವಗಳು, ಅಮೂರ್ತತೆಯಲ್ಲಿದ್ದು

ಸೃಜನಾತ್ಮಕ ಕ್ರಿಯೆಯಲ್ಲಿ ಮೂರ್ತೀಭವಿಸುವ ಕ್ರಿಯೆ, ಹೊಂದಾಣಿಕೆ ಅಗತ್ಯವೇ, ಅನಿವಾರ್ಯವೇ, ಮೌಲ್ಯಯುತ ಸಮಾಜ ನಂಬಿಕೆಗೆ ಪರಂಪರೆಯಿಂದ ಅನುಸರಿಸಿಕೊಂಡು ಬಂದಿರುವ ಮೌಲ್ಯಗಳನ್ನು ಮುಂದುವರೆಸಬೇಕೆ? ಅಥವಾ ತಿರಸ್ಕರಿಸಬೇಕೆ? ಇಲ್ಲವೆ ಹೊಸತನ ಹೊಸಮೌಲ್ಯಗಳನ್ನು ರೂಪಿಸುವುದೇ ಒಟ್ಟಿನಲ್ಲಿ ಸಾಮಾಜಿಕ ಸ್ಥಿತ್ಯಂತರ ಕ್ರಿಯೆಗಳು ಮುಂದಿನ ಸಾಹಿತ್ಯ ಹಂತಗಳಾದ ದಲಿತ ಮತ್ತು ಬಂಡಾಯ ಸಾಹಿತ್ಯದಲ್ಲಿ ಕಂಡು ಬರುವುದು.

ಹತ್ತೊಂಬತ್ತನೇ ಶತಮಾನದ ಉತ್ತರಾರ್ಧದಲ್ಲಿ ಭಾರತದಲ್ಲಿ ಕ್ರಾಂತಿಕಾರಕ ಬದಲಾವಣೆಗಳು ಕಾಣತೊಡಗಿದವು. ೧೯೬೦ರ ಸುಮಾರಿಗೆ ಶತಮಾನಗಳಿಂದ ಶೋಷಣೆಗೆ ಒಳಗಾಗಿದ್ದ 'ಹರಿಜನರು' ದಲಿತರು ಕೆಲವು ಸಮಾಜ ಸುಧಾರಕರ ಪ್ರಭಾವದಿಂದ 'ಮಹಾರಾಷ್ಟ್ರ'ದಲ್ಲಿ ತಲೆ ಎತ್ತಲಾರಂಭಿಸಿದರು; ಸಂಗ್ರಾಮಕ್ಕಿಳಿಯ ತೊಡಗಿದರು. ದಲಿತ ಸಾಹಿತ್ಯ ಸೃಷ್ಟಿಯಾಗಿ ಪ್ರಬಲ ಪ್ರವಾಹವಾಗತೊಡಗಿದಾಗ ದಲಿತ ಪದದ ಅರ್ಥ, ದಲಿತ ಸಾಹಿತ್ಯದ ಸ್ವರೂಪ ಕುರಿತು ವ್ಯಾಪಕ ಚರ್ಚೆ ಆರಂಭವಾಗಿ ಇವು ಗಂಭೀರ ವಿಷಯಗಳಾದವು. ಚಳುವಳಿಗಳ ಮೂಲಕ ದಲಿತ ಸಾಹಿತ್ಯ ಜನ್ಮತಾಳಿತು.

೧೯೭೦ರ ಆರಂಭದಲ್ಲಿ ಈ ಚಳುವಳಿ ಕರ್ನಾಟಕವನ್ನೂ ಪ್ರವೇಶಿಸಿತು. ೧೯೬೯ರ ಅಂಬೇಡ್ಕರ ಜಯಂತಿಯಲ್ಲಿ 'ಹಾವನೂರ್ ಆಯೋಗ'ವನ್ನು ಜಾರಿಗೆ ತರಬೇಕೆಂದು ಬಿ.ಬಸವಲಿಂಗಪ್ಪನವರ ನೇತೃತ್ವದಲ್ಲಿ ದಲಿತ ರಾಜಕೀಯ ನಾಯಕರು ಹೋರಾಟ ನಡೆಸಲು ಆರಂಭಿಸಿದರು. ೧೯೭೪ರಲ್ಲಿ ಬಿ.ಬಸವಲಿಂಗಪ್ಪನವರಿಂದ ಹುಟ್ಟಿಕೊಂಡ 'ಬೂಸ ಪ್ರಕರಣ' ದಲಿತರಲ್ಲಿ ಹೋರಾಟದ ಮನೋಭಾವವನ್ನು ಮೂಡಿಸಿತು. ಮೇಲ್ವರ್ಗದವರ ಮತ್ತು ದಲಿತರ ನಡುವೆ ಸಾಮಾಜಿಕ ಹೋಯ್ದಾಟ ಪ್ರಾರಂಭವಾಗಿ ಮುಂದೆ 'ಕರ್ನಾಟಕ ದಲಿತ ಸಂಘರ್ಷ ಸಮಿತಿ'ಯಾಗಿ ಬೆಳೆಯಿತು. ೧೯೭೫ರಲ್ಲಿ 'ದಲಿತ ಬರಹಗಾರರ ಯುವ ಸಂಘಟನೆ'ಯಾಗಿ ಬೆಳೆಯಿತು. ೧೯೪೩ರಲ್ಲಿ ಪ್ರಾರಂಭವಾಗಿದ್ದ 'ಪ್ರಗತಿಶೀಲ ಚಳುವಳಿ' ೧೯೭೬ರಲ್ಲಿ ಮತ್ತೆ ಪ್ರಗತಿ ಪಂಥವಾಗಿ ತಲೆ ಎತ್ತಿತು. ಕೆಲವು ದಲಿತ ಪಂಥಗಳು ತಲೆ ಎತ್ತಿದವು. ಇವುಗಳಲ್ಲಿ ಬಹಳ ಮುಖ್ಯವಾದವು 'ಕರ್ನಾಟಕ ಬರಹಗಾರ ಮತ್ತು ಕಲಾವಿದರ ಒಕ್ಕೂಟ'. ರೈತ ಸಂಘಟನೆ, ಸಮುದಾಯ ಸಂಘಟನೆ ಮೊದಲಾದ ಉಳಿದ ಸಂಘಟನೆಗಳೊಂದಿಗೆ ದಲಿತ ಸಂಘಟನೆಗಳೂ ಜೊತೆ ಸೇರಿ ಸಾಂಸ್ಕೃತಿಕವಾಗಿ ಮುಂದುವರೆಯುತ್ತಿದ್ದರು.

೧೯೭೯ರಲ್ಲಿ ಮಾರ್ಚ್ ತಿಂಗಳ ೧೦ ಮತ್ತು ೧೧ರಲ್ಲಿ ಧರ್ಮಸ್ಥಳದಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನವರು ನಡೆಸಿದ ೫೧ನೇ ಸಾಹಿತ್ಯ ಸಮ್ಮೇಳನದಲ್ಲಿ 'ದಲಿತ ಗೋಷ್ಠಿ'ಯನ್ನು ಇಡಲು ಅಧ್ಯಕ್ಷರು ನಿರಾಕರಿಸಿದರು. ಆಗ ದಲಿತರು ಮತ್ತು ದಲಿತೇತರರಿಂದ ಪ್ರಾರಂಭವಾದದ್ದೇ 'ಬಂಡಾಯ ವೇದಿಕೆ'. ಕಾಲಕ್ರಮೇಣ ದಲಿತರಿಗೂ ದಲಿತೇತರರಿಗೂ ಭಿನ್ನಭಿಪ್ರಾಯಗಳು, ಘರ್ಷಣೆಗಳು ಪ್ರಾರಂಭವಾಗಿ ಕೆಲವು ದಲಿತರು ಈ ವೇದಿಕೆಯಿಂದ ಹೊರ ಬಂದು ೧೯೮೫ರಲ್ಲಿ 'ದಲಿತ ಲೇಖಕರ ಕಲಾವಿದರ ಬಳಗ'ವನ್ನು ಪ್ರಾರಂಭಿಸಿತು. ಅನೇಕ ಸಾಹಿತ್ಯಿಕ ಚಟುವಟಿಕೆಗಳನ್ನು ನಡೆಸಲಾರಂಭಿಸಿತು. ಇಲ್ಲಿಂದ 'ದಲಿತ ಸಾಹಿತ್ಯ' ವೈವಿಧ್ಯಮಯವಾಗಿ ಮುಂದುವರೆಯಲಾರಂಭಿಸಿತು.

ದಲಿತ ಸಾಹಿತ್ಯ ಚಳುವಳಿಯ ಮೂಲ ನೆಲೆ 'ಅಂಬೇಡ್ಕರ್ ವಿಚಾರವಾದ'. ಅಂಬೇಡ್ಕರ್ ತತ್ವಗಳಲ್ಲಿ ಸ್ವಾತಂತ್ರ್ಯ, ಸಮಾನತೆ, ಸಹೋದರತ್ವ, ವಿಜ್ಞಾನ ದೃಷ್ಟಿ, ವರ್ಣರಹಿತ, ವರ್ಗರಹಿತ, ಪ್ರಜಾಸತ್ತೆಯ ಸಮಾಜವಾದ ಎಂಬ ತತ್ತ್ವಗಳು ದಲಿತರ ಮಾರ್ಗದರ್ಶಕ ಸೂತ್ರಗಳಂತಿವೆ. ಅಲ್ಲದೆ 'ಮಾರ್ಕ್ಸ್‌ವಾದ'ದ ಪ್ರಭಾವವೂ ಇದೆ. "ಖಡ್ಗವಾಗಲಿ ಕಾವ್ಯ; ಜನರ ನೋವಿಗೆ ಮಿಡಿವ ಪ್ರಾಣಮಿತ್ರ" ಎಂಬ ಘೋಷಣೆಗೆ ಮಾರ್ಕ್ಸ್‌ವಾದವೇ ಮೂಲ ಪ್ರೇರಣೆ. ಬುದ್ಧ, ಜ್ಯೋತಿ ಬಾ ಫುಲೆಯ ಸಮತಾವಾದವೂ ಪ್ರಭಾವ ಬೀರಿವೆ. ಉತ್ತರ ಕರ್ನಾಟಕದ ಲೇಖಕರ ಮೇಲೆ ಮಹಾರಾಷ್ಟ್ರದ ದಲಿತ ಪ್ಯಾಂಥರ್ಸ್ ಚಳುವಳಿ ದಕ್ಷಿಣ ಕರ್ನಾಟಕದ ಲೇಖಕರ ಮೇಲೆ 'ತೆಲುಗಿ'ನ 'ದಿಗಂಬರ' ಮತ್ತು 'ತಿರುಗು ಬಡುಲು' ಕಾವ್ಯದ ಪ್ರಭಾವಗಳು ಆಗಿವೆ. ಆರಂಭದಲ್ಲಿ ಸ್ವಲ್ಪ ಕಾಲ ಲೋಹಿಯವಾದದ ಪ್ರಭಾವ ಕಾಣುತ್ತದೆ. ಗಾಂಧೀವಾದವೂ ಅಪ್ರತ್ಯಕ್ಷವಾಗಿ ಪ್ರೇರಕ ಶಕ್ತಿಯಾಗಿದೆ.

ದಲಿತ ಪದಕ್ಕೆ ದಲಿ ಎಂಬುದೇ ಮೂಲ. ದಲಿ ಎಂದರೆ ದಳ, ಗುಂಪು, ಸೈನ್ಯ, ಶೋಷಿತ, ದಮನಕ್ಕೆ ಒಳಗಾದವರು ಎಂದರ್ಥ. ಶತಮಾನಗಳಿಂದಲೂ ತುಳಿತಕ್ಕೆ ಒಳಗಾದವರು ಅಸ್ಪೃಶ್ಯರೇ ಆಗಿದ್ದಾರೆ. ಹೀಗಾಗಿ ಆರ್ಥಿಕವಾಗಿ, ಸಾಮಾಜಿಕವಾಗಿ, ರಾಜಕೀಯವಾಗಿ ಶೈಕ್ಷಣಿಕ ಶಕ್ತಿಗಳ ಜೊತೆಗೆ ಅಸ್ಪೃಶ್ಯತೆಯೂ ಸೇರಿ ಎಲ್ಲ ದೃಷ್ಟಿಯಿಂದ ತುಳಿತಕ್ಕೆ ಒಳಗಾದವರು ಎಂದರ್ಥ.

ಹಿಂದು ಧರ್ಮದ ಮತ್ತು ಸಾಂಪ್ರದಾಯಿಕ ಸಮಾಜದಿಂದ ಬಹಿಷ್ಕೃತರಾಗಿದ್ದ 'ಅಸ್ಪೃಶ್ಯರು' 'ಅತಿಶೂದ್ರರು' 'ಅಂತ್ಯಜರು' 'ಪಂಚಮರು' 'ಹರಿಜನ' ಇತ್ಯಾದಿ ಅನೇಕ

ಹೆಸರುಗಳಿಂದ ಗುರುತಿಸಲ್ಪಡುತ್ತಿದ್ದರು. ೧೯೭೩ರಲ್ಲಿ ಬಿ.ಬಸವಲಿಂಗಪ್ಪನವರು 'ಕನ್ನಡ ಸಾಹಿತ್ಯ ಬೂಸ' ಎಂದು ಕರೆದುದರ ಪರಿಣಾಮವಾಗಿ ದಲಿತರೆಲ್ಲಾ ಒಂದಾದರು. 'ನಾವು ಹರಿಯ ಮಕ್ಕಳಲ್ಲ; ನಾವು ಮನುಷ್ಯರ ಮಕ್ಕಳೇ" ಎಂಬವಾದ ಬಲಿತು ಸ್ವಾಭಿಮಾನ, ಆತ್ಮಸ್ಥೈರ್ಯ ಮೂಡಿದವು. ಮೊದಲು ಯಾವ ಹೆಸರಿನಿಂದ ಗುರುತಿಸಲ್ಪಡುವುದು ಅವಮಾನವೆಂದು ಭಾವಿಸಿದ್ದರೋ ಅದೇ ಹೆಸರನ್ನು ಅಭಿಮಾನದಿಂದ ಹೇಳುವ ಸಾಹಸ ಮಾಡಿದರು. ಹೊಲೆ – ಮಾದಿಗರು ಎಂದು ನೇರವಾಗಿ ಹೇಳುವ ಹೊಸ ಅಲೆ ಪ್ರಾರಂಭವಾಯಿತು. ಈ ಜಾಗೃತಿಯ ಹಾದಿಯಲ್ಲಿ ಹಿಂದಿನ ಅನೇಕ ಹೆಸರುಗಳ ಹಿಂದೆ 'ದಲಿತ' ಪದ ಮುಂದೆ ಬಂತು. 'ಮಹಾರಾಷ್ಟ್ರದಿಂದ ಬಂದ ಈ ಪದ ಕರ್ನಾಟಕದಲ್ಲಿ ಬಳಕೆಯಾಗಲಾರಂಭಿಸಿತು.

ದಲಿತ ಎನ್ನುವ ಪದದ ಅರ್ಥ ದಳ, ಗುಂಪು, ಸೈನ್ಯ ಶೋಷಿತ ಎನ್ನುವ ಅರ್ಥಗಳು ಶಬ್ದಕೋಶದಲ್ಲಿ ಕಂಡು ಬರುತ್ತದೆ. ದಲಿತರು ಎಂದರೆ ಶೋಷಿತರು ಅಸ್ಪೃಶ್ಯರು, ಆದಿವಾಸಿಗಳು, ಕೆಳಜಾತಿಯವರು, ಕರಿಯಜನರು, ಹೀನವಾದ ಉದ್ಯೋಗವನ್ನು ಮಾಡುವವರು ಮುಂತಾದ ಅರ್ಥಗಳಲ್ಲಿ ಅವರನ್ನು ಅರ್ಥೈಸಲಾಗುತ್ತದೆ. ಕರಿ, ಕೆಂಪು, ಕಂದು ಜನರನ್ನು ಅಮೇರಿಕದಲ್ಲಿ ದಲಿತರು ಎಂದು ಕರೆಯಲಾಗುತ್ತದೆ. ಒಟ್ಟಾರೆಯಾಗಿ ದಲಿತರು ಎಂದರೆ ಶೋಷಿತರು, ಅಸ್ಪೃಶ್ಯರು ಆದಿವಾಸಿಗಳು ಹಿಂದುಳಿದ ಜನಾಂಗದವರು, ಜ್ಯಾತಿವ್ಯವಸ್ಥೆ ಮತ್ತು ಅದರ ಸಮಗ್ರ ವೈಚಾರಿಕ ವ್ಯವಸ್ಥೆಯನ್ನು ನಾಶಮಾಡಬಯಸುವವರು, ಈ ಜಗತ್ತನ್ನು ಮರುಕಟ್ಟ ಬಯಸುವವರು ಎಂದು ಅರ್ಥೈಸಬಹುದು. ಅಲ್ಲದೆ ಸಾಂಸ್ಕೃತಿಕವಾಗಿ, ಸಾಮಾಜಿಕವಾಗಿ, ಆರ್ಥಿಕವಾಗಿ, ರಾಜಕೀಯವಾಗಿ, ಧಾರ್ಮಿಕವಾಗಿ ಯಾರು ಧಮನಕ್ಕೆ ಒಳಗಾಗಿರುತ್ತಾರೋ ಅವರೆಲ್ಲರು ದಲಿತರು ಎಂದು ಅರ್ಥೈಸಲಾಗುತ್ತದೆ. ಇನ್ನು ದಲಿತರು ಎಂದರೆ ಯಾರು ಎಂತವರನ್ನು ನಾವು ದಲಿತರು ಎಂದು ಕರೆಯುತ್ತೇವೆ ಎಂಬುದನ್ನು ಕೆಲವು ವಿದ್ವಾಂಸರು ತಮ್ಮದೇ ಆದ ವ್ಯಾಖ್ಯಾನವನ್ನು ಕೊಟ್ಟಿದ್ದಾರೆ.

"ಡಾ. ಅರವಿಂದ ಮಾಲಗತ್ತಿ

ಶತಮಾನಗಳಿಂದ ಜನ ಸಮುದಾಯದಲ್ಲಿ ಆರ್ಥಿಕ, ರಾಜಕೀಯ ಮತ್ತು ಶೈಕ್ಷಣಿಕವಾಗಿ ಶೋಷಣೆಗೆ ಒಳಗಾದವರು ಒಟ್ಟು ಮನುಷ್ಯ ಸಮಾಜದೊಂದಿಗೆ ಬದುಕಲಾಗದೆ ಊರ ಹೊರಗೆ ವಾಸಿಸಿ ಕೀಳುವೃತ್ತಿಗೆ ಅವಲಂಬಿತವಾಗಿ ಹೆಸರು

ಹೇಳಿಕೊಳ್ಳಲು ನಾಚಿಕೆ ಪಡುವ ಅಸ್ಪೃಶ್ಯರು ಅಥವಾ ಬಹಿಷ್ಕೃತರೆನಿಸಿಕೊಂಡವರೆಲ್ಲರೂ ದಲಿತರೆನಿಸಿಕೊಳ್ಳುತ್ತಾರೆ.

ಡಾ.ಸಿದ್ಧಲಿಂಗಯ್ಯ

ದಲಿತರೆಂದು ಗುರುತಿಸಿಕೊಳ್ಳಬೇಕಾದರೆ ದಲಿತನಾಗಿ ಹುಟ್ಟಿರಬೇಕು. ದಲಿತರ ಬಗ್ಗೆ ಅನುಕಂಪವನ್ನು ಹೊಂದಿರಬೇಕು. ದಲಿತ ಶೋಷಣೆ ಮತ್ತು ದಬ್ಬಾಳಿಕೆಯ ಬಗ್ಗೆ ಪ್ರತಿಭಟನೆ ಮಾಡಬೇಕು. ಇವುಗಳ ಜೊತೆಗೆ ಸಾಮಾಜಿಕವಾಗಿ, ಆರ್ಥಿಕವಾಗಿ ಧಾರ್ಮಿಕವಾಗಿ, ಶೋಷಿಸಲ್ಪಟ್ಟವನಾಗಿರಬೇಕು. ತನ್ನ ಶೋಷಣೆಯ ಪ್ರಜ್ಞೆಯಿಂದ ತನ್ನ ಹಕ್ಕುಗಳ ಬಗ್ಗೆ ಅರಿವು 'ಇರುವವನು' ದಲಿತ ಇಂಥವರು ದಲಿತರು ಎಂದು ಅವರು ವಾಖ್ಯಾನಿಸುತ್ತಾರೆ.(ಗಂಜ್ಯಾಳ ಬೋರಮ್ಮ ಬಸಂತ್ರಾಯ–ಮೊಗಳ್ಳಿ ಕಥನ : ದಲಿತತ್ವದ ಶೋಧ, ಪುಟ ೫)

ಹೊಸ ಸಂವೇದನೆಯ ಅಭಿವ್ಯಕ್ತಿ ಮಾಧ್ಯಮದಲ್ಲಿ ದಲಿತ ಸಾಹಿತ್ಯವನ್ನು ಗುರುತಿಸಬಹುದು. ತತ್ವಗಳು ಧೋರಣೆಗಳ ಬಗ್ಗೆ ಆಲೋಚಿಸಿದಾಗ ವಾಸ್ತವವಾದಿಗಳು, ಹೊಸ ಸಮಾಜ ಕಟ್ಟುವ ಹಂಬಲವುಳ್ಳವರು, ಶೋಷಣೆಯಿಂದ ಮುಕ್ತಗೊಳ್ಳುವ ಬಯಕೆ, ಪರಂಪರ ಮೌಲ್ಯಗಳನ್ನು ಧಿಕ್ಕರಿಸಿದ್ದು, ನೈಜ್ಯ ಬದುಕಿನ ಸ್ಥಿತಿಗತಿಗಳ ಬಗ್ಗೆ ಅರಿವುಳ್ಳವರು, ತಲೆ ಬಾಗಿ ಬದುಕಿದ್ದವರು ತಲೆ ಎತ್ತಿ ಬದುಕ ಬೇಕೆಂಬ ನಿಲುವು, ಹೊಸ ಸಮಾಜ ಕಟ್ಟುವಲ್ಲಿ ನಂಬಿಕೆ ಉಳ್ಳವರು, ಸರಿಸಮಾನತೆ ಸಹಬಾಳ್ವಿಕೆ ತತ್ವವನ್ನು ಅನುಷ್ಠಾನಕ್ಕೆ ತರಲು ಪ್ರಯತ್ನಿಸುವ ನೆಲೆ ಹೀಗೆ ಅನೇಕ ಅಂಶಗಳನ್ನು ಗುರುತಿಸಬಹುದು.

ವಾಸ್ತವವಾದಿಗಳಾದ ದಲಿತ ಪಂತದವರು ತಾವು ಬದುಕಿ ಜೀವಿಸಿದ, ಬಾಳಿದ, ಸಮಾಜದ ಸ್ಥಿತಿಗತಿಗಳ ಬಗ್ಗೆ ಚಿತ್ರಿಸುತ್ತಾ ಹೊಸಬದುಕಿನ ಚಿಂತನೆ ಕಲ್ಪನೆಗಳತ್ತ ಮನಸ್ಸು ಕೊಟ್ಟವರು. ಕಥಾವಸ್ತು, ಭಾಷೆ, ಶೈಲಿ, ತಂತ್ರ ಇವು ಅಭಿವ್ಯಕ್ತಿಯ ಪರಿಕರಗಳಾದಂತೆ ಕಥೆಗಾರರು ಕಂಡ ಪಡೆದ ಅನುಭವಗಳನ್ನು ವಾಸ್ತವತೆಯ ಚಿತ್ರಣದೊಂದಿಗೆ ಯಥಾವತ್ತಾಗಿ ಚಿತ್ರಿಸಿರುವುದು. ಅಜೇಯ ಮತ್ತು ಧೋರಣೆಗಳನ್ನು ಪಾತ್ರಗಳ ಮೂಲಕ ಬಿತ್ತರಗೊಳಿಸಿದ್ದರು ಹೊಸ ಸಮಾಜದ ಸೃಷ್ಟಿಯಲ್ಲಿ ಕಥಾಗಾರರ ಪಾತ್ರವು ಇದೇ ಎಂಬುವುದನ್ನು ಗುರುತಿಸಬಹುದು.

ದಲಿತರ ಕನಸುಗಳಿಗೆ ಆಕಾರವನ್ನು ಸ್ವರೂಪವನ್ನು ರಚಿಸಬಲ್ಲಂತಹ ಹಂಬಲವುಳ್ಳವು, ಮೂಢನಂಬಿಕೆಗಳಿಂದ ಮುಕ್ತಗೊಳಿಸುವುದು, ವೈಜ್ಞಾನಿಕ ಪ್ರಜ್ಞೆ ಮೂಡಲು

ಶಿಕ್ಷಣ ಅಗತ್ಯವೆಂಬುದು ಶಿಕ್ಷಣವೆಂದರೆ ಕೇವಲ ಓದು ಬರೆಯುವುದಲ್ಲ, ಮನಸ್ಸಿನ ಮನಬದಲಾವಣೆಗೆ ವಿಚಾರ ಮಾಡಬಲ್ಲ ಸಾಮರ್ಥ್ಯ ರೂಪಿಸುವಂತಹ ಶಿಕ್ಷಣ ಅನಿವಾರ್ಯತೆಯನ್ನು ಕಂಡುಕೊಂಡದ್ದು.

ದಲಿತ ಸಂವೇದನೆ ಅಭಿವ್ಯಕ್ತಿ ಎಂದರೆ ಇನ್ನೊಂದು ಅರ್ಥದಲ್ಲಿ ಸಾಂಸ್ಕೃತಿಕ ಚಿಂತನೆಯೇ. ಒಂದು ಪ್ರದೇಶದ ಅಂತ್ಯಜ ಎಂದು ಗುರುತಿಸುವ ಒಂದು ಗುಂಪು, ಒಂದು ಸಮೂದಾಯ, ಒಂದು ಸಮಾಜವಾಗಿ, ಒಂದು ಜನಾಂಗೀಯ ಜೀವನಕ್ರಮ ನಂಬಿಕೆಯಿಂದ ಆಚರಣೆ ತಲೆ ತಲಾಂತರದಿಂದ ಮುಂದುವರೆಸಿಕೊಂಡು ಹೋಗುವ ಕ್ರಿಯಾತ್ಮಕ ಪ್ರಕ್ರಿಯೆಯನ್ನು ಸಂಸ್ಕೃತಿ ಎಂದು ಹೇಳಿದಂತೆಯೇ; ಅದರ ಅಧ್ಯಯನವನ್ನು ಸಾಂಸ್ಕೃತಿಕ ಶೋಧನೆಯನ್ನು ಗುರುತಿಸುವುದು ಒಟ್ಟು ಒಂದು ಗ್ರಾಮದ ವಾತಾವರಣದ ಜೀವನ ವಿಧಿ ಕ್ರಮ ಇವುಗಳ ಮೊತ್ತವೆ ಸಾಂಸ್ಕೃತಿಕ ನಿಲುವು.

ವರ್ಣಾಶ್ರಮ ಪದ್ಧತಿಯಲ್ಲಿ ಪಂಚಮರಾದ ಹೊಲೆ – ಮಾದಿಗರ ಸಮೂದಾಯವು ಒಂದು. ಒಂದು ಹಳ್ಳಿ ಎಂದರೆ ಎಲ್ಲವರ್ಗದವರು ಕೂಡಿ ಜೀವಿಸುವುದು ಪ್ರತ್ಯೇಕತೆ, ಗುಂಪುಗಳುಂಟು, ಒಂದು ಜಾತಿಗೆ ಭಾಷೆ, ಭಾಷೆಯಂತೆ ಆಚರಣೆಗಳು ನಂಬಿಕೆಗಳು ಭಿನ್ನ ಹೀಗೆ ಭಾಷೆಯು ಜನಜೀವನದ ಸಂಸ್ಕೃತಿಯನ್ನು ಯಥಾರ್ಥವಾಗಿ ಚಿತ್ರಿಸುತ್ತಾ ಅಭಿವ್ಯಕ್ತ ಪಡಿಸುವುದು. ಈ ನಿಟ್ಟಿನಲ್ಲಿ ಮೊಗಳ್ಳಿ ಗಣೇಶ್ ಅವರ ಪ್ರಯತ್ನವನ್ನು ನಾವು ಅವರ ಸಾಹಿತ್ಯದಲ್ಲಿ ಕಾಣಬಹುದು.

" 'ದಲಿತ'ಎಂಬುದು ಇವತ್ತಿನ ಸಂದರ್ಭದಲ್ಲಿ ಕೆಳಜಾತಿಗಳ ಅರಿವಿನ ವಿಕಾಸವನ್ನು, ಹಕ್ಕೊತ್ತಾಯದ ದನಿಯನ್ನು, ಸಕಾರಾತ್ಮಕವಾದ ಸಾಮಾಜಿಕ, ರಾಜಕೀಯ, ಆರ್ಥಿಕ, ಶೈಕ್ಷಣಿಕ, ಮಾನವೀಯ ಒಪ್ಪಂದಗಳನ್ನು ನಿರೂಪಿಸುವ ಸಂಕಥನಗಳ ಸಂಕೇತವಾಗಿದೆ. ಜಾತಿಯ ಮಿತಿಗಳನ್ನು ಮೀರುವ ಆಶಯಗಳ ಸೂಚಿಯಾಗಿದೆ" (ಜಿ.ಎಸ್. ಅಮೂರ. ಕನ್ನಡ ಕಥನ ಸಾಹಿತ್ಯ: ಸಣ್ಣಕತೆ ಪುಟ ೩೬೪).

ಮೊಗಳ್ಳಿ ಗಣೇಶ್ ಜನಿಸಿದ್ದು ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಚನ್ನಪಟ್ಟಣ ತಾಲೂಕಿನ ಸಂತೆಮಾಗೇನ ಎಂಬ ಹಳಿಯಲ್ಲಿ; ೧೯೬೨ರಲ್ಲಿ.

ಎಂ.ಎ ಅರ್ಥಶಾಸ್ತ್ರ ಮತ್ತು ಜಾನಪದ ಪದವಿಗಳನ್ನು ಮೈಸೂರು ವಿ.ವಿ. ಯಿಂದ ಗಳಿಸಿ ಕೆಲ ಕಾಲ ಮಹಾರಾಜಕಾಲೇಜು ಮತ್ತು ಮಾನಸಗಂಗೋತ್ರಿಯಲ್ಲಿ ಜಾನಪದದ

ಅಧ್ಯಾಪಕರಾಗಿ ಸೇವೆ ಸಲ್ಲಿಸಿದ ಇವರು ಈಗ ಕನ್ನಡ ವಿಶ್ವವಿದ್ಯಾಲಯದಲ್ಲಿ ಅಧ್ಯಾಪಕರಾಗಿಯೂ ದಲಿತ ಅಧ್ಯಯನ ಪೀಠದ ಸಂಚಾಲಕರಾಗಿಯೂ ಕಾರ್ಯ ನಿರ್ವಹಿಸುತ್ತಿದ್ದಾರೆ.

'ಬುಗುರಿ'(೧೯೯೨), 'ಅತ್ತೆ'(೧೯೯೭), 'ಭೂಮಿ'(೨೦೦೧), 'ಮಣ್ಣು'(೨೦೦೫), 'ಕನ್ನೆ ಮಳೆ'(೨೦೦೮), ಇವರ ಕಥಾಸಂಕಲನಗಳಾದರೆ, 'ಶತಮಾನ', 'ಸೊಲ್ಲು', 'ಮೌಖಿಕ ಕಥನ', ಇವರ ಇತರ ಕೃತಿಗಳಾದರೆ, 'ಗತಿ' ಕಾದಂಬರಿಯಾಗಿದ್ದು, 'ದೇಸಿ'ಯು ಜಾನಪದದ ಬಗೆಗಿನ ವಿಭಿನ್ನ ವಿಶಿಷ್ಟ ವಿನೂತನ ಕೃತಿಯಾಗಿದೆ.

'ಕರ್ನಾಟಕ ಸಾಹಿತ್ಯ ಅಕಾಡಮಿ'ಯ ಪ್ರಶಸ್ತಿ ಮತ್ತು 'ಕರ್ನಾಟಕ ಜನಪದ ಮತ್ತು ಯಕ್ಷಗಾನ ಅಕಾಡಮಿ'ಯ ಪ್ರಶಸ್ತಿಗಳನ್ನೂ ತಮ್ಮ ಕೃತಿಗಳಿಗೆ ಗಳಿಸಿರುವ ಮೊಗಳ್ಳಿಯವರು ತಮ್ಮ ಈವರೆಗಿನ ಸಾಹಿತ್ಯಿಕ ಪ್ರತಿಭೆಗಾಗಿ 'ವರ್ಧಮಾನ' ಸಾಹಿತ್ಯ ಪ್ರಶಸ್ತಿ 'ಸರ್. ಎಂ. ವಿಶ್ವೇಶ್ವರಯ್ಯ' ಸಾಹಿತ್ಯ ಪ್ರಶಸ್ತಿ ಮತ್ತು 'ಅಭಿವ್ಯಕ್ತಿ ಶ್ರೀ' ಪ್ರಶಸ್ತಿಯನ್ನೂ ಪಡೆದಿದ್ದಾರೆ.

ಇವರ ಕಥೆಗಳು 'ಹಿಂದಿ' 'ಇಂಗ್ಲೀಷ್' 'ಮಲೆಯಾಳಂ' 'ತಮಿಳು' 'ತೆಲಗು' 'ಗುಜರಾತಿ' 'ಬಂಗಾಳಿ' ಭಾಷೆಗಳಿಗೂ ಅನುವಾದಗೊಂಡಿವೆ.

ಮೊಗಳ್ಳಿ ಗಣೇಶ್ ಅವರು ದೇವನೂರರ ನಂತರದ ಪ್ರಮುಖ ಕಥೆಗಾರರಾಗಿ ಕಂಡು ಬರುತ್ತಾರೆ. ಮೊಗಳ್ಳಿಯವರು ತಮ್ಮ ಹಲವಾರು ಕಥೆಗಳನ್ನು ಅವರ ಅನುಭವದ ಆಳದಿಂದ ಕಟ್ಟಿಕೊಡುತ್ತಾ ಬರುತ್ತಾರೆ. ಅವರು ಸ್ವತಃ ಅನುಭವಿಸಿ ಅವುಗಳ ಆಳಕ್ಕೆ ಇಳಿದು ಅವುಗಳನ್ನು ಕಥೆಯ ರೂಪದಲ್ಲಿ ತಂದಿರುವುದು ಕಂಡು ಬರುತ್ತದೆ. ಅವರು ಚಿಕ್ಕವರಿಂದ ಹಿಡಿದು ಇಲ್ಲಿಯವರೆಗೂ ಅವರ ಅನುಭವಕ್ಕೆ ಬಂದಿರುವ ಅನುಭವಗಳನ್ನು ಅವರ ಕಥೆಗಳಲ್ಲಿ ಮೂಡಿಸಿದ್ದಾರೆ. ಇವರ ಕಥೆಗಳಲ್ಲಿ ಜನಪದ ಮತ್ತು ಶಿಷ್ಟಸಾಹಿತ್ಯದ ಆಶಯಗಳೆರಡೂ ಸಮರ್ಥವಾಗಿ ಕಥೆಯ ರೂಪವನ್ನು ಪಡೆದುಕೊಂಡಿವೆ. ಸಮುದಾಯದ ಒಂದುಕಾಲದ ಬದುಕಿನ ಬಗ್ಗೆ ಜನರ ಬಗ್ಗೆ ಮರುಹಂಬಲದ ಧೋರಣೆ ಹೊಸ ಬದುಕಿನ ಹೆಬ್ಬಾಗಿಲಿನಲ್ಲಿ ನಿಂತಿರುವ ಇಂದಿನ ಸಮುದಾಯದ ದೌರ್ಬಲ್ಯಗಳನ್ನು ಅಳೆಯಲು ಮೊಗಳ್ಳಿಯ ಕಥೆಗಳು ಒಂದು ಮಾನದಂಡವಾಗುತ್ತದೆ.

ದಲಿತ ಸಮುದಾಯದ ಜೀವನ ಚಿತ್ರಣ ವಾಸ್ತವಿಕ ಪ್ರಜ್ಞೆಯ ಅಭಿವ್ಯಕ್ತಿಯಾಗಿರುವುದು ಮೊಗಳ್ಳಿ ಗಣೇಶ್ ಅವರ ಕಥೆಗಳಲ್ಲಿ ಕಂಡು ಬರುತ್ತದೆ.

ಪರಿಸರ, ಜನಜೀವನ, ಸಂದರ್ಭ, ಸನ್ನಿವೇಶಕ್ಕೆ ಅನುಗುಣವಾಗಿ ಸಹಜ ಕ್ರಿಯೆಯಲ್ಲಿ ತೊಡಗಿರುವಂತೆ ಇವರ ಕಥೆಗಳು ವಿಶೇಷವಾಗಿವೆ. ದಲಿತ ಜನಾಂಗದ ಬದುಕು, ಜೀವನ, ನಂಬಿಕೆ, ಆಚಾರ-ವಿಚಾರಗಳು, ನಡವಳಿಕೆ, ಸಂಸ್ಕಾರಗಳಿಂದ ಪುರಸ್ಕೃತಗೊಂಡ ಅವರ ಸಂಸ್ಕೃತಿಯ ಚಿತ್ರಣ ಯಥಾರ್ಥತೆಯಿಂದ ಕೂಡಿದೆ. ಹೀಗಾಗಿ ಒಂದು ಪರಿಸರದ ಅಭಿವ್ಯಕ್ತಿ ಎಂದು ಹೇಳಬಹುದಾದರೂ ವಾಸ್ತವತೆಯ ಸೊಗಡು, ಭೂಮಿಯ ಸಂಬಂಧ, ಮಣ್ಣಿನ ವಾಸನೆ, ಬದುಕಿನ ತಿರುವುಗಳು, ಹುಟ್ಟು, ಸಾವು, ಸುಖ, ದುಃಖ, ಸಂತೋಷ, ಭಾವರಾಗಗಳು ದ್ವೇಷ, ಮಾತ್ಸರ್ಯ, ವೇದನೆಗಳು, ಕ್ರೌರ್ಯ, ಭ್ರಮೆ, ವಾಸ್ತವ, ಅಸಮಾನತೆ, ಗಂಡು ಹೆಣ್ಣುಗಳ ನಡುವಿನ ಸಂಬಂಧಗಳು, ವೈಪರಿತ್ಯಗಳು, ಹಳ್ಳಿಯ ವಾತಾವರಣದ ನೈಜ್ಯ ಚಿತ್ರಣಗಳು ಕಥೆಯಲ್ಲಿ ಕಂಡು ಬರುತ್ತವೆ.

"ಮೊಗಳ್ಳಿಯವರ 'ಭತ್ತ' ಕಥೆ ದಲಿತರ ಹಸಿವಿನ ಜೊತೆಗೆ ಜಾತಿ ಶೋಷಣೆಯನ್ನು ಪ್ರತಿಪಾದಿಸುತ್ತದೆ. ಹಸಿವಿನಿಂದ ಕಂಗಾಲಾದ ದಲಿತರು ಅನ್ನ ಉಂಡು ಬಹಳ ವರ್ಷಗಳಾಗಿ, ತಮ್ಮ ದುಡಿಮೆಯ ಮೂಲಕ ಸಿಗಬಹುದಾದ ಭತ್ತದ ಕನಸಿಗಾಗಿ ಕಾಯುತ್ತಾರೆ. ಅಲ್ಪ ಪ್ರಮಾಣದ ಕಳ್ಳತನವದಲ್ಲಿ ಸಂಪಾದಿಸುವ ಪ್ರಯತ್ನ ಮಾಡುವುದು ಅವರ ದಾರಿದ್ರ್ಯದ ಸ್ಥಿತಿಗೆ ಪ್ರತೀಕವಾಗಿದೆ"(ಡಾ.ಸಿ.ಬಿ.ಹೊನ್ನಯ್ಯ- ಕನ್ನಡ ಸಣ್ಣಕತೆಗಳು ದಲಿತ ಸಂಸ್ಕೃತಿ ಪುಟ ೨೧೫).

"ಹಸಿವು ಬಡತನ ಮೊಗಳ್ಳಿ ಗಣೇಶ್‌ರವರ ಕಥನಗಳಲ್ಲಿ ಹೆಚ್ಚು ಪ್ರತಿಧ್ವನಿಸುವ ವಸ್ತುವಾಗಿದೆ. ಶೋಷಿತ ಜನಸಮುದಾಯದಲ್ಲಿ ಹುಟ್ಟಿ ಬೆಳೆದ ಇವರು ಅವರ ದುಃಖ ದುಮ್ಮಾನಗಳನ್ನು ಕಣ್ಣಾರೆ ಕಂಡವರು. ಹಸಿವು ಬಡತನದ ಸಂಘರ್ಷಾತ್ಮಕ ಬದುಕಿನೊಟ್ಟಿಗೆ ತಮ್ಮ ಅಸ್ತಿತ್ವವನ್ನು ಕಂಡುಕೊಳ್ಳಲು ಹಪಹಪಿಸುವ ದಲಿತ ಜಗತ್ತುನ್ನು ಅದರ ಜೀವದನಿಯನ್ನು 'ಭತ್ತ', 'ತೊಟಿಲು', 'ಒಂದು ಹಳೆ ಚಡ್ಡಿ', 'ಅನಾದಿ' ಮೊದಲಾದ ಕಥಾನಕಗಳಿಂದ. ಅವರ ಅನುಭವಲೋಕದೊಟ್ಟಿಗೆ ಬೆರೆತು ಹೋಗಿರುವ ಭಾರತೀಯ ಪಾರಂಪರಿಕ ಗ್ರಾಮೀಣ ಜಗತ್ತಿನ ಇನ್ನಿತರೆ ಸಮುದಾಯಗಳ ನೋವು, ನಲಿವುಗಳು, ವೈರುಧ್ಯಗಳು ಇವೆಲ್ಲವನ್ನೂ ಮೀರಿದ ಮಾನವೀಯ ಅಂತಃಕರಣದ ನೆಲೆಯಲ್ಲಿ ಅವರ ಕಥನ ಜಗತ್ತು ತುಡಿಯುತ್ತಿರುವುದನ್ನು ಕಾಣಬಹುದಾಗಿದೆ." (ಗಂಜ್ಯಾಳ ಬೋರಮ್ಮ ಬಸಂತ್ರಾಯ-ಮೊಗಳ್ಳಿ ಕಥನ : ದಲಿತತ್ವದ ಶೋಧ, ಪುಟ ೨೦)

# ಅಧ್ಯಾಯ ಮೂರು

## ಜಾನಪದ ಹಿನ್ನೆಲೆಯಲ್ಲಿ ಮೊಗಳ್ಳಿ

## ಗಣೇಶ್‌ರವರ ಸಣ್ಣಕಥೆಗಳು

# ಅಧ್ಯಾಯ ಮೂರು

# ಜಾನಪದ ಸಾಹಿತ್ಯದ ಹಿನ್ನೆಲೆಯಲ್ಲಿ ಮೊಗಳ್ಳಿ ಗಣೇಶ್ ರವರ ಸಣ್ಣಕಥೆಗಳ ಅಧ್ಯಯನ

ಮೊಗಳ್ಳಿ ಗಣೇಶ್ ಅವರು ಒಬ್ಬ ಆಧುನಿಕ ಸೃಜನಶೀಲ ದಲಿತ ಬರಹಗಾರರು. ಇತ್ತೀಚಿನ ಹೊಸ ಪೀಳಿಗೆಯಲ್ಲಿ ಭರವಸೆ ಹುಟ್ಟಿಸುವ ದಲಿತ ಕತೆಗಾರರಾಗಿದ್ದಾರೆ. ಚನ್ನಪಟ್ಟಣ ರಾಮನಗರ ಬದುಕಿನ ಹಿನ್ನೆಲೆಯನ್ನಿಟ್ಟುಕೊಂಡು ಬರೆಯುವ ಅವರ ಬರವಣಿಗೆ ಕನ್ನಡ ಸಾಹಿತ್ಯದಲ್ಲಿ ವಿಶಿಷ್ಟವು, ವೈವಿಧ್ಯವೂ ಆಗಿದೆ.

ಇತ್ತೀಚಿನ ಹೊಸ ಪೀಳಿಗೆಯಲ್ಲಿ ಭರವಸೆ ಹುಟ್ಟಿಸುವ ದಲಿತ ಕಥೆಗಾರರು ಮೊಗಳ್ಳಿ ಗಣೇಶ್. ಅವರು ಬರೆದ ಕಥೆಗಳ ಸಂಖ್ಯೆ ಮತ್ತು ಅವುಗಳ ಕಲಾತ್ಮಕತೆಯ ಅಭಿವ್ಯಕ್ತಿ ಸಂವೇದನೆಯ ದೃಷ್ಟಿಯಿಂದ ಮುಖ್ಯರಾದವರು. ಅವರ ಬುಗುರಿ, ಭೂಮಿ, ಮಣ್ಣು ಕಥಾ ಸಂಕಲನಗಳು ಗಮನಸೆಳೆಯುತ್ತವೆ. ಕನ್ನಡ ಸಾಹಿತ್ಯದ ತುತ್ತತುದಿಯಲ್ಲಿರುವ ಮೊಗಳ್ಳಿ ಗಣೇಶ್ ಅವರು ಸೃಜನಶೀಲ ದಲಿತ ಲೇಖಕರಾಗಿದ್ದಾರೆ. ಕನ್ನಡ ಕಥಾ ಸಂವೇದನೆಯನ್ನು ಸಮಸ್ಟಿ ಜೀವನಾ ಮೌಲ್ಯಗಳನ್ನು ಆರ್ದ್ರತೆಯಿಂದ ವಿಸ್ತರಿಸಿದ ಮೊಗಳ್ಳಿ ಗಣೇಶ್ ಅವರ ಕಥನಗಳು ತಮ್ಮ ಕಾಲದ ತಲ್ಲಣಗಳನ್ನು ಹಾಗೂ ಅದರ ಸಾಧ್ಯತೆಗಳನ್ನು ದಟ್ಟವಾಗಿ ಕಟ್ಟಿಕೊಡುತ್ತಾ ಬಂದಿದ್ದಾರೆ. ಅದೇ ಹಾದಿಯಲ್ಲಿ ಅಂತಃಕರಣದ ದಿಕ್ಸೂಚಿ ಹಿಡಿದು ಬಹುದೂರದ ಪಯಣಕ್ಕೆ ಹೊರಟಿರುವ ಈ ಕಥೆಗಳು ನಿಸ್ಸಂದೇಹವಾಗಿ ನಮ್ಮನ್ನು ನಿರಂತರವಾಗಿ ಕಾಡುತ್ತಲೇ ಮಾನವೀಯ ಚಿಲುಮೆಯಲ್ಲಿ ಮೀಯಿಸುತ್ತವೆ. ದಲಿತ ಸಂವೇದನೆಯ ನಾಡಿಬಡಿತ ತೆರೆದುಕೊಳ್ಳುವ ಈ ಕಥೆಗಳು ಜಗತ್ತಿನ ಯಾವುದೇ ಅಂತಃಕರಣದ ಕಥೆಗಳ ಜೊತೆಗೆ ಸಮವಾಗಿ ನಿಲ್ಲಬಲ್ಲವಾಗಿವೆ.

ಮೊಗಳ್ಳಿ ಗಣೇಶ್ ರವರು ಒಬ್ಬ ದಲಿತ ಲೇಖಕರಾಗಿ ದಲಿತ ಜನಾಂಗದ ಅಂತಃಸತ್ವವನ್ನು ಜಗತ್ತಿನ ಈ ಹೊತ್ತಿನ ಮುಂದೆ ಅನಾವರಣಗೊಳಿಸುತ್ತಿರುವ ರೀತಿ ವಿಶೇಷವಾಗಿದೆ. ತಮ್ಮ ಕಥೆಗಳನ್ನು ಜನಪದ ಕಥೆಗಳ ರೀತಿಯಲ್ಲಿ ವಿಶಿಷ್ಟವಾಗಿ, ವಿಭಿನ್ನವಾಗಿ ರಚಿಸಿದ್ದಾರೆ. ಮೊಗಳ್ಳಿ ಗಣೇಶ್ ಅವರ ಕಥೆಗಳ ಜನಪದ ಹಿನ್ನೆಲೆಯ ಅಧ್ಯಯನ ಕೂಡ ಕತೆಗಳ ಅರ್ಥಪೂರ್ಣತೆ ಹೆಚ್ಚಿಸುತ್ತದೆ. ಅದರಿಂದ ಮೊಗಳ್ಳಿ ಗಣೇಶ್ ಅವರ ಕಥೆಗಳ

ಜಾನಪದ ಹಿನ್ನೆಲೆಯನ್ನು ವಸ್ತು, ಭಾಷೆ, ಶೈಲಿ, ತಂತ್ರ ಮುಂತಾದ ಪರಿಕಲ್ಪನೆಯಲ್ಲಿ ಅಧ್ಯಯನ ಮಾಡಲಾಗುತ್ತದೆ.

### ೩.೧. ವಸ್ತು.

ಮೊಗಳ್ಳಿ ಗಣೇಶ್ ಅವರು ತಮ್ಮ ಕಥೆಗಳಿಗೆ ಬಳಸಿಕೊಂಡಿರುವ ವಸ್ತು ತಾವು ಕಂಡುಂಡ ಅನುಭವಗಳೇ ಎಂದು ಹೇಳಬಹುದು. ಅವರು ಕಂಡ, ಅನುಭವಿಸಿದ ಅವರ ಗಮನಕ್ಕೆ ಬಂದ ದಲಿತಜೀವನ, ಹಳ್ಳಿಯ ಮುಗ್ಧ ದಲಿತರ ಬಾಳು, ಅವರ ಬಡತನ, ಹಸಿವು, ಜಾತಿ ರಾಜಕೀಯ ಕಲಹ, ಮೇಲ್ಜಾತಿಯವರ ಶೋಷಣೆಗೆ ಬಲಿಯಾದ ಮುಗ್ಧ ದಲಿತ ಅವಿದ್ಯಾವಂತರ ನೋವು, ವಿದ್ಯಾವಂತ ದಲಿತರ ಅಸಹಾಯಕತೆ, ಸಾಮಾಜಿಕ ಸಮಸ್ಯೆಗಳಾದ ವರ್ಣ ವರ್ಗ ಸಂಘರ್ಷ, ಅಸ್ಪೃಶ್ಯತೆ ಊಳಿಗಮಾನ್ಯ ವ್ಯವಸ್ಥೆಯಿಂದ ದಲಿತರಿಗೆ ಆಗುವ ಶೋಷಣೆ, ಸ್ತ್ರೀ ಮತ್ತು ಪುರುಷ ಶೋಷಣೆ, ಮೇಲು ಕೀಳು ಸಾಮಾಜಿಕ ಮೂಢನಂಬಿಕೆಗಳ ಹೆಸರಿನಲ್ಲಿ ನಡೆಯುವ ಅನಿಷ್ಟ ಆಚಾರ ವಿಚಾರ, ಅನ್ಯಾಯ, ಅವಮಾನ, ಭೂಮಿಗೆ ಸಂಬಂಧಿಸಿದ ಕಲಹ, ಪುರೋಹಿತ ಮತ್ತು ಶೂದ್ರ ಮುಂತಾದ ಚಿತ್ರಣಗಳು ಇವರ ಕಥೆಗಳ ವಸ್ತುಗಳಾಗಿ ಕಂಡು ಬರುತ್ತವೆ. ಇವರ ಈ ಎಲ್ಲಾ ಕಥಾವಸ್ತುಗಳ ಕಥೆ ಜಾನಪದ ಕಥೆಗಳ ಸ್ವರೂಪವನ್ನು ಪಡೆದು ಕೊಂಡಿವೆ. ಆ ಆಶಯಗಳನ್ನು ಬಳಸಿಕೊಳ್ಳುವುದರ ಮೂಲಕ ದಲಿತರ ಬದುಕಿನ ಸಂವೇದನೆಗಳಿಗೆ ಒತ್ತು ಕೊಡುತ್ತಾರೆ. ಕಳೆದು ಹೋದ ದಲಿತರ ಬದುಕನ್ನು ಜಾನಪದ ಸಂಸ್ಕೃತಿಯನ್ನು ಹುಡುಕಿ ತೆಗೆವ ಪ್ರತೀಕವಾಗಿ ಕಥೆಗಳನ್ನು ರಚಿಸಿದ್ದಾರೆ.

ಕಥೆಗಳಲ್ಲಿ ಹಸಿವು ಬಡತನ ಪ್ರತಿಧ್ವನಿಸುವ ವಸ್ತುವಾಗಿದೆ. ಶೋಷಿತ ಜನಸಮುದಾಯದಲ್ಲಿ ಹುಟ್ಟಿ ಬೆಳೆದ ಇವರು ಅವರ ದುಃಖ ದುಮ್ಮಾನಗಳನ್ನು ಕಣ್ಣಾರೆ ಕಂಡವರು. ಅವರ ಅನುಭವಲೋಕದೊಟ್ಟಿಗೆ ಬೆರೆತು ಹೋಗಿರುವ ಭಾರತೀಯ ಪಾರಂಪರಿಕ ಗ್ರಾಮೀಣ ಜಗತ್ತಿನ ಇನ್ನಿತರೆ ಸಮುದಾಯಗಳ ನೋವು ನಲಿವುಗಳು ವೈರುಧ್ಯಗಳು ಇವೆಲ್ಲವನ್ನೂ ಮೀರಿದ ಮಾನವೀಯ ಅಂತಃಕರಣದ ನೆಲೆಯಲ್ಲಿ ಅವರ ಕಥನ ಜಗತ್ತು ತುಡಿಯುತ್ತಿರುವುದನ್ನು ಕಾಣಬಹುದಾಗಿದೆ.

ಇವರು ತಮ್ಮ ಅನುಭವವನ್ನು ಕಥೆಯನ್ನಾಗಿಸಲು ಆಯ್ಕೆ ಮಾಡಿಕೊಂಡಿರುವ ರೀತಿಯೆ ಭಿನ್ನ ಜಾನಪದದ ಹಿನ್ನೆಲೆಯ ಮುಖಾಂತರ ತಮ್ಮ ಕಥೆಗಳನ್ನು ನಿರೂಪಣೆ

ಮಾಡುತ್ತಾ ಹೋಗುತ್ತಾರೆ. ಸೂರ್ಯವತಿ, ಈ ಮೇಳಕ್ಕುಂಟೇನಯ್ಯ ಕೊನೆ, ಹಬ್ಬ, ಮೋಚಿಯಗಂಗೆ. ಕೊಂಡ, ಯುದ್ಧ ಪಕ್ಷಿ, ತೋಪು, ಕಾಳಗದ ಹುಂಜ, ಮುಂತಾದ ಕಥೆಗಳು ಜನಪದ ವಸ್ತುವನ್ನು ಹೊಂದಿರುವ ಕಥೆಗಳಾಗಿವೆ. ಜನಪದ ವಸ್ತುವನ್ನೆ ಬಳಸಿಕೊಂಡು ದಲಿತರ ಬದುಕನ್ನು ಕಟ್ಟಿ ಕೊಡುವ ಪ್ರಯತ್ನವನ್ನು ಮಾಡಿದ್ದಾರೆ. ಆ ಮೂಲಕ ದಲಿತರ ಬದುಕನ್ನು ಅನಾವರಣಗೊಳಿಸಿದ್ದಾರೆ.

**ಯುದ್ಧ ಪಕ್ಷಿ**

ಈ ಕಥೆಯು ಸಂಪೂರ್ಣವಾಗಿ ಜನಪದ ಪ್ರೇರಣಯಿಂದ ರೂಪುಗೊಂಡಿರುವುದು. 'ಮುತ್ತುಗದ ಎಲೆಯ ಗೋತಾಯಿ'( ಡಿ. ಲಿಂಗಯ್ಯ.- ಕನ್ನಡ ಜನಪದ ಕಥೆಗಳು, ಪುಟ ೧) ಎಂಬ ಕಥೆಯ ಪ್ರಭಾವ ಇದರ ಮೇಲಾಗಿರಬಹುದು. ಆ ಕಥೆಯಲ್ಲಿ ದೊರೆಯ ಮಗಳು ಸತ್ತು ಹೋಗಿದ್ದ ರಾಜಕುಮಾರನನ್ನು ಮದುವೆಯಾಗುತ್ತಾಳೆ. ಅದೇ ರೀತಿಯಲ್ಲಿ ಜನಪದದಲ್ಲಿರುವ ಸತ್ತು ಹೋದವರನ್ನು ಬದುಕಿಸಿಕೊಂಡು ಮದುವೆಯಾಗುವುದು ಎಂಬ ಕಥೆಗಳನ್ನೆ ಆಧಾರವಾಗಿಟ್ಟು ಕೊಂಡು ಯುದ್ಧ ಪಕ್ಷಿ ಕಥೆಯನ್ನು ಬರೆದಿದ್ದಾರೆ. ಈ ಕಥೆಯಲ್ಲಿ ಬರುವ ಹುಡುಗಿಯು ಸತ್ತ ರಾಜಕುಮಾರನನ್ನು ಮದುವೆಯಾಗುವ ಕನಸನ್ನು ಕಾಣುತ್ತಾಳೆ. ಆದರೆ ಕಥೆಗಾರರು ಜನಪದ ಕಥೆಗಳನ್ನು ಆಧಾರವಾಗಿಟ್ಟು ಕೊಂಡು ಆಧುನಿಕಕ್ಕೆ ಹೊಂದಿಕೊಳ್ಳುವಂತೆ ಕಥೆಗಳನ್ನು ರಚನೆ ಮಾಡಿಕೊಂಡಿರುವುದರಿಂದ ಕಥೆಯ ಅಂತ್ಯವನ್ನೆ ಬದಲಾಯಿಸುತ್ತಾರೆ. ಮುತ್ತುಗದ ಎಲೆ ಗೋತಾಯಿ ಕಥೆಯಲ್ಲಿ ಸುಖಾಂತ್ಯವಾದರೆ ಈ ಕಥೆಯಲ್ಲಿ ಅಂತ್ಯವೇ ಇಲ್ಲ ಆಧುನಿಕತೆಯ ಧಾಳಿಗೆ ಜನಪದ ಸಿಕ್ಕಿ ಕೊಂಡಿರುವುದನ್ನು ಸಾಂಕೇತಿಕವಾಗಿ ಸೂಚಿಸಿದ್ದಾರೆ. ಜನಪದ ನಂಬಿಕೆ ಕನಸು ಬಿರುಗಾಳಿಗೆ ಸಿಕ್ಕಿ ತತ್ತರಿಸುತ್ತಿರುವಂತೆ ಚಿತ್ರಿಸಿದ್ದಾರೆ. ಯುದ್ಧ ಪಕ್ಷಿಗಳ ಬಾಂಬ್ ಧಾಳಿ ಅವರಿಬ್ಬರನ್ನು ಸೇರಲು ಬಿಡಬಾರದೆಂಬ ಪಕ್ಷಿಗಳ ಹಠ ಅದಕ್ಕೆ ಪ್ರತಿಯಾಗಿ ಅವಳು ಹೋರಾಟವನ್ನು ನಡೆಸುತ್ತಿದ್ದಾಳೆ ಅನ್ನಿಸುತ್ತದೆ ಆದರೆ ಎಷ್ಟೇ ಆದರೂ ನಮ್ಮ ಸಂಸ್ಕೃತಿಯೇ ಉಳಿಯುತ್ತದೆ ಎಂಬ ನಂಬಿಕೆ ಇಲ್ಲಿ ಕಂಡು ಬರುತ್ತದೆ. ಯುದ್ಧ ಪಕ್ಷಿಗಳ ಬಾಂಬ್ ಧಾಳಿ ಸುರಿದರು ಕಾಮನ ಬಿಲ್ಲಾದ ಆ ಚಲುವೆ ಆಕಾಶದಲ್ಲಿ ಬೆಳೆಯುತ್ತಲೇ ಇದ್ದಳು ಜಗತ್ತಿನ ಒಡಲಲ್ಲಿ ವಿಷ ಕರಗುತ್ತಿತ್ತು ಎಂಬಲ್ಲಿ ಎಲ್ಲವೂ, ಎಲ್ಲ ಕ್ರೌರ್ಯ ಒಂದಲ್ಲ ಒಂದು ದಿನ ಕರಗಿ ಹೋಗುತ್ತದೆ ಎಂಬ ಆಶಾಭಾವವೇ ಎಂದು ಕಾಣುತ್ತದೆ.

**ಸೂರ್ಯವತಿ**

ಸೂರ್ಯವತಿ ಇದೊಂದು ಜಾನಪದ ಪ್ರೇರಣೆವುಳ್ಳ ಕಥೆ. ಈ ಕಥೆ ನಮ್ಮ ಗ್ರಹಗಳಾದ ಸೂರ್ಯ ಚಂದ್ರ ನಕ್ಷತ್ರಗಳ ಬಗ್ಗೆ ಜಾನಪದೀಯ ದಾಟಿಯಲ್ಲಿ ನಿರೂಪಿಸಿದ ಸುಂದರವಾದ ಕಥೆ. ಈ ಕಥೆಯಲ್ಲಿ ಕತ್ತಲೆ ಬೆಳಕು ನಕ್ಷತ್ರ ಕ್ರಿಯೆ ಸೃಷ್ಟಿ ಸ್ಥಿತಿ ಲಯಗಳು ಪುರಾಣಾತ್ಮಕ ಚಿಂತನೆಗಳ ನೆಲೆ ಸಾಧ್ಯ ಅಸಾಧ್ಯತೆಯಲ್ಲಿ ಮೂರ್ತಭಾವದ ಸೃಷ್ಟಿ ಭಾವಗಳ ಚಾಲನಾ ಸ್ವರೂಪ, ಕ್ರೌರ್ಯ, ಹಿಂಸೆ, ನೋವು, ದುಃಖ, ಅಸಹಾಯಕತೆ, ಶೋಷಣೆ ಇವುಗಳ ಕಲಾತ್ಮಕ ಚಿಂತನೆಗಳು ಮೂರ್ತ ಅಮೂರ್ತಗಳ ನಡುವೆ ನಡೆಯುವ ಮಾನಸಿಕ ಪ್ರಕ್ರಿಯೆಗಳು ಕಂಡು ಬರುತ್ತವೆ.

ತನ್ನ ಪೂರ್ವಿಕರನ್ನು ನೆನಪು ಮಾಡಿಕೊಳ್ಳುವುದರ ಮೂಲಕ ಪ್ರಾರಂಭವಾಗುವ ಈ ಕಥೆ ಅನಂತರದಲ್ಲಿ ಪೂರ್ವಿಕರ ಬದುಕನ್ನು ಬಿಚ್ಚಿಡುತ್ತಾ ಹೋಗುತ್ತದೆ. ಅವರ ಕಾಲದಲ್ಲಿರುವ ಚೆಲುವೆಯೊಬ್ಬಳು ಸೂರ್ಯಳಾದ ಪರಿವರ್ತನೆಯನ್ನು ಈ ಕಥೆಯ ಮೂಲಕ ಚಿತ್ರಿಸುತ್ತಾರೆ.

ಕತ್ತಲೆ ಮಬ್ಬುಬೆಳಕಿನಲ್ಲಿ ವಾಸಿಸುತ್ತಿದ್ದ ಅವರ ಪೂರ್ವಿಕರು ಎಂದೂ ಬೆಳಕನ್ನೆ ನೋಡಿರಲಿಲ್ಲ. ಅವರ ಮಧ್ಯ ಒಬ್ಬ ಅಪೂರ್ವ ಸುಂದರಿ ಹುಟ್ಟಿ ಬರುತ್ತಾಳೆ. ಅವಳನ್ನೆ ತಮ್ಮ ಕುಲದೇವತೆ ಎಂದು ಭಾವಿಸಿ ಅವಳ ನೋಡುತ್ತಾ ತಮ್ಮ ಕಷ್ಟ ಸುಖಗಳನ್ನು ಮರೆಯುತ್ತ ಕನಸುಗಳನ್ನು ಕಟ್ಟಿಕೊಳ್ಳುತ್ತಿದ್ದರು. ಹೀಗಿರುವಾಗ ಒಂದು ದಿನ ಸ್ನಾನಕ್ಕೆ ಹೋದಂತಹ ಅವಳನ್ನು ಯಾರೋ ಹಿಂಬಾಲಿಸುತ್ತಿರುವ ಅನುಮಾನ ಅವಳಿಗೆ ಬರುತ್ತದೆ. ಅವಳಿಗೆ ಯಾರು ಕಾಣಿಸುವುದಿಲ್ಲ ಆದರೆ ಯಾರದೋ ನಗು ಮಾತ್ರ ಅಲೆ ಅಲೆಯಾಗಿ ಅವಳನ್ನು ಹಿಂಬಾಲಿಸುತ್ತಾ ಬರುತ್ತದೆ. ಅದರಿಂದ ತಪ್ಪಿಸಿಕೊಳ್ಳುವ ಸಲುವಾಗಿ ಅವಳು ಅಲ್ಲಿಂದ ದೂರ ಬಹುದೂರ ಓಡುವ ಪ್ರಯತ್ನವನ್ನು ಮಾಡುತ್ತಾಳೆ. ಆದರೆ ಅವಳ ಸುತ್ತೆಲ್ಲಾ ಮಾಯಾಮೃಗವೊಂದರ ಕಾಮೋತ್ಕಷವಾದ ವಾಸನೆ ಅವಳನ್ನು ಹಿಂಬಾಲಿಸುತ್ತಾ ಹೋಗುತ್ತಾದೆ. ಅವನಿಂದ ತಪ್ಪಿಸಿಕೊಳ್ಳುವ ಸಲುವಾಗಿ ತನ್ನವರಿಂದ ದೂರವಾದ ಅವಳೂ, ಅವನೂ ಎಷ್ಟೋ ಕಾಲದವರೆಗೆ ಇಬ್ಬರೂ ಆಕಾಶದಲ್ಲಿ ಅಲೆಯ ತೊಡಗಿದರು. ಅವಳೂ ಇವನ ಕೈಗೆ ಸಿಗುವುದು ಅಷ್ಟು ಸುಲಭವಿರಲಿಲ್ಲ ಮನಸ್ಸುಗಳೆರಡು ಬೆರೆಯಲಿಲ್ಲ.

ಅವಳು ತಿರಸ್ಕಾರದಿಂದ ಕಿಡಿಯಾಗಿ ಕೆಂಡಾಮಂಡಲವಾಗಿ ಈ ಕಪಟಿ ಕಾಮುಕನಿಗೆ ಶಿಕ್ಷೆಕೊಡಬೇಕೆಂದು ಅನಂತ ಕಾಲದ ಮೌನದ ಎಲ್ಲ ಬೆಂಕಿ ಪರ್ವತಗಳನ್ನು ಭೂಮಿಯಿಂದ ಕೂಗಿಕೊಂಡಳು. ಅವಳ ಆ ಕೂಗಿಗೆ ಅಸಂಖ್ಯಾಂತರ ಒಡಲುರಿ ತುಂಬಿಕೊಂಡು ಆಕಾಶದೆತ್ತರಕ್ಕೆ ಬೆಳೆದವಳಂತೆ ಎದ್ದು ನಿಂತವಳೇ ಎಲ್ಲೆಡೆ ಮೊಳಗುವಂತೆ 'ನನ್ನನ್ನು ಕೂಡಬೇಕೆಂದು ತಾನೆ ನಿನ್ನ ಈ ಹಠ, ಪ್ರೇಮದಿಂದ ಕೂಡಲು ಬಾರದೆ ಹೀಗೆ ಕದ್ದು ಬಂದು ಹಿಂಸೆ ಕೊಟ್ಟು ಬೆರೆಯಲು ಬರುವ ನಿನಗೆ ನಾನು ಬೇಕು ತಾನೆ; ಬಾ ಈಗ ಬಾ. ಗಂಡಸಾದರೆ ಬಾ. ನಿಜವಾದ ಪುರುಷನಾದರೆ ಬಾ. ಬಾ ನನ್ನ ಕೂಡುವ ಶಕ್ತಿಯಿದ್ದರೆ ಈಗ ಕೂಡು ಬಾ. ಬೆರೆಯೆ ಬಾ. ಒಳಕ್ಕೆ ಬರುವ ಸಾಮರ್ಥ್ಯವಿದ್ದರೆ ಬಾ' ಎಂದು ಕಾಲುಗಳನ್ನು ಆಕಾಶದ ಪೂರ್ವ ಪಶ್ಚಿಮ ದಿಕ್ಕುಗಳೆರಡಕ್ಕೂ ವಿಸ್ತರಿಸಿಟ್ಟು ಕೈಗಳ ಅನಂತ ಎತ್ತರಕ್ಕೇರಿಸಿ ಅಸಾಧ್ಯವಾದ ಆವೇಶದಿಂದ ಧಗ ಧಗನೆ ಬೆಂಕಿಯಾಗಿ ನಭೋ ಮಂಡಲವನ್ನೇ ಆವರಿಸಿ ಉರಿಯತೊಡಗಿದಳು ಆಕಾಶ ಕಾಯ ಇವಳನ್ನೆ ಬೆರಗಾಗಿ ನೋಡುತ್ತಿದ್ದವು. ಹೆಮ್ಮಾರಿ ಬೆಳಕಾಗಿ ಕೆನ್ನಾಲಿಗೆಯ ಹೊರ ಸೂಸಿ ಆ ಮಾಯ ಪುರುಷನ ಕಡೆ ನೋಡುತ್ತಾ 'ಬಾರೋ ಹಿಂಬಾಲಿಸುವ ಗಂಡಸೇ ಶೂರನೇ ವೀರನೆ ಪುರುಷ ಸಿಂಹನೇ ಬಾರೋ ನನ್ನೊಳಕ್ಕೆ ಬರುವೆಯೆನೋ, ಬರೋ ನನ್ನ ಗರ್ಭ ಸೇರಬಾರೋ' ಎಂದು ಆಕಾಶ ಬಿರಿತುವಂತೆ ಕೂಗಿಕೊಂಡು ಉರಿಯುತ್ತ ಉರಿಯುತ್ತ ದುಂಡು ದುಂಡುಗೆ ಸುತ್ತುತ್ತಾ ಚೆಲುವಾದ ತನ್ನ ದೇಹವನ್ನು ಅಳಿದು ಸೂರ್ಯವತಿಯಾಗಿಬಿಟ್ಟಳು.

ಅವಳ ಮೈ ಸೂರ್ಯವಾಗಿತ್ತು ಅವಳ ಆ ರೂಪೋತ್ಕರ್ಷವನ್ನು ಮಾತನ್ನು ಕೇಳಿಯೇ ಇಳಿದು ಹೋದ. ಅವಳ ಸೌಂದರ್ಯದ ಭೀಕರತೆಯ ಎದಿರು ಪಾಪ ಪ್ರಜ್ಞೆಯಿಂದ ಅಧೀರನಾಗಿ ಬಳಲಿ ಮಂಕಾದ. ಅವಳನ್ನು ಪಡೆಯಲು ಆಗದೆ ಅವಳ ದಾರಿಯಲ್ಲಿ ಕಲ್ಲು ಮುಳ್ಳಾದೆನಲ್ಲಾ ಎನ್ನುತ್ತಾ ಸಂಕಟವನ್ನು ಅನುಭವಿಸಿದನು. ಎಂದಾದರೊಮ್ಮೆ ತನ್ನ ತಪ್ಪನ್ನು ಮನ್ನಿಸಿ ಅವಳು ನನ್ನೆಡೆಗೆ ನೋಡಿಯಾಳೆಂದು ಕಾದೆ ಕಾಯುತ್ತಾ ತಣ್ಣಗಿನ ಬೆಳೆದಿಂಗಳಾಗಿ ಹೋದ ಅವನು ಚಂದ್ರನಾಗಿ ಬಿಟ್ಟ.

ಅವಳು ಧಗಧಗಿಸಿ ಉರಿಯುತ್ತಲೇ ಬೆಳಕಾಗುತ್ತಿದ್ದಳು. ಕೆಳಗೆ ಬೆಳದಿಂಗಳಾಗಿ ಚಂದಿರನಾಗಿ ರೂಪಾಂತರಗೊಂಡಿದ್ದ ಅವನನ್ನು ದಿಟ್ಟಿಸಿ ನೋಡಿ ಆಕಾಶ ಕಾಯಗಳನ್ನು ಸಾಕ್ಷಿಗೆ ಕರೆದು ಈ ರೀತಿ ಹೇಳಿದಳು " 'ನನ್ನನ್ನು ಹೀಗೆ ನನ್ನವರಿಂದ ದೂರ ಮಾಡಿ ಇಲ್ಲಿಗೆ ಇಷ್ಟು ದೂರಕ್ಕೆ ತಂದು ಈ ಸ್ಥಿತಿಗೆ ಒಳಪಡಿಸಿದ ನೀನು ಇನ್ನೆಂದು ನನ್ನ ಮುಂದೆ ಬರಬೇಡ. ಮುಖ ತೋರಿಸ ಬೇಡ ನಾನು ನಡೆದು ಹೋದ ದಾರಿಯಲ್ಲಿ ಹಿಂಬಾಲಿಸಬೇಡ.

ನನ್ನ ಮುಟ್ಟಿಸಿಕೊಳ್ಳಬೇಡ. ನಾನು ಬಂದಾಗ ಈ ಆಕಾಶದಲ್ಲಿ ನೀನು ಬರಬೇಡ, ನೀನು ಬಂದಾಗ ನಾನು ಬರುವುದಿಲ್ಲ. ಹಗಲಿನಲ್ಲಿ ನಾನು ಬಂದು ಹೋಗುವೆ. ಕತ್ತಲಲ್ಲಿ ಈ ಪಾಪಿ ಕತ್ತಲಲ್ಲಿ ನೀನು ರಾತ್ರಿಯಲ್ಲಿ ಬಂದು ಅಲೆದಾಡಿ ಹೊರಟು ಹೋಗು. ನನ್ನ ಕಣ್ಣಿಗೆ ಕಾಣಿಸದಂತೆ ಮರೆಯಾಗಿ ಹೋಗು' "( ಮೊಗಳ್ಳಿ ಗಣೇಶ್ – ಮೊಗಳ್ಳಿ ಕಥೆಗಳು, ಪುಟ ೪೧೯) ಎಂದು ಅವಳು ಸೂರ್ಯವತಿ ಕೂಗಿ ಕೂಗಿ ಆಜ್ಞೆ ಮಾಡಿದಳು.

**ಮೋಚಿಯ ಗಂಗೆ**

ಈ ಕಥೆ ಕಲ್ಪನಾತೀತವಾದ ಸಾಧ್ಯ ಅಸಾಧ್ಯತೆಗಳ ನಡುವೆ ನಡೆಯುವ ಕ್ರಿಯೆ. ವಾಸ್ತವ ಭ್ರಮೆಗಳ ನಡುವೆಯಿರುವ ನಂಬಿಕೆಯೇ ಈ ಕಥೆಯ ಜೀವಾಳ. ಪೂರ್ಣ ಪ್ರಮಾಣದ ಜನಪದ ನಂಬಿಕೆಯಿಂದ ರಚಿತಗೊಂಡಿದೆ.

ಶೆಟ್ಟಿ ಮೋಚಿಯಿಂದ ಪಡೆದ ಮುತ್ತೈದೆಯ ಭಾಗೀನ ಪಡೆಯಲು ಗಂಗೆ ಕೈ ನೀಡಿದಾಗ ಶೆಟ್ಟಿಯು ಬಳೆಯನ್ನು ಎಳೆದುಕೊಂಡದ್ದು, ಮಾರಲು ನಿಂತದ್ದು, ಮೋಚಿ ಗಮನಿಸಿದ್ದು ಅದನ್ನು ಉಳಿಸಲು ನಡೆಸಿದ ತಂತ್ರಗಳು ಮುಂದೆ ಒಂದು ದೊಡ್ಡ ಅನಾಹುತಕ್ಕೆ ದಾರಿಯಾದದ್ದು ಗಂಗೆ ನೀರು ಭೂಮಿ ಸಂಪತ್ತು ಆಕಾಶದಲ್ಲಿ ಕಾಣುವ ಸೂರ್ಯ ಸೂರ್ಯನ ಕಾಂತಿ ಬೆಳಕಿ ಮನಸ್ಸಿನ ಕ್ರಿಯೆಗಳು ಪ್ರಕೃತಿ ಮತ್ತು ಪುರುಷ ಅಮೂರ್ತ ಸಂಬಂಧದ ಕಲ್ಪನೆಯ ಕಥೆ.

ಇದೊಂದು ಜನಪದ ವಸ್ತುವುಳ್ಳ ಕಥೆ. ಮಾಯ-ಮಂತ್ರ ಅಮೂರ್ತ ನೆಲೆಯಲ್ಲಿ ಕಲ್ಪನೆಗೊಳ್ಳುವ ಭ್ರಮೆ ವಾಸ್ತವತೆಗಳ ನಡುವೆ ಇರುವ ಘರ್ಷಣೆಗಳು ಸತ್ಯ ಅಸತ್ಯ ವಾಸ್ತವ ಅವಾಸ್ತವತೆ ಪರಿಸರ ಪರಿಕಲ್ಪನೆಯ ನೆಲೆ ನಂಬಿಕೆ ಅಪನಂಬಿಕೆ ದರ್ಶನದ ಕಾಣ್ಕೆ ಕಾಣುವ ನಿಲುವುಗಳಲ್ಲಿ ಉಂಟಾಗುವ ಘರ್ಷಣೆಯ ಸ್ವರೂಪ ಉನ್ನತ ವರ್ಗದ ವ್ಯಕ್ತಿಗೆ ದುರಾಶೆಯ ಮನೋಭಾವ ಚಿತ್ರಿಸುವಂತೆ ಮೋಚಿಯ ಮಗಳು ಬಳೆಗಳು ಪ್ರೀತಿಯ, ನಂಬಿಕೆಯ ಭಾರತೀಯ ಸಂಸ್ಕೃತಿಯ ಸಂಕೇತವಾಗಿದೆ. ಇಲ್ಲಿ ಗಂಗೆ ಮಗಳಾಗಿದ್ದರೂ ಪೂಜ್ಯತೆಯ ಮನೋಭಾವವಿರುವುದನ್ನು ಕಂಡು ಕೊಳ್ಳಬಹುದು.

ಮೋಚಿಯ ಪ್ರತಿಭಟನೆ ಬಂಡಾಯ ಹೋರಾಟದ ಮನೋಭಾವ ಹೊಸ ಜಗತ್ತಿನತ್ತ ಹೆಜ್ಜೆಹಾಕುವ ಮಾನಸಿಕ ಸ್ಥಿತಿ ವಿಶೇಷವಾದದ್ದು ಜಾನಪದೀಯ ಸೊಗಡಿನಿಂದ ಪ್ರಾದೇಶಿಕ ಮಹತ್ವ ಪಡೆದ ಭಾಷೆ ನೈಜ್ಯತೆಯ ನೆಲೆಯನ್ನು ಗುರುತಿಸಬಹುದು. ಶೆಟ್ಟಿ ಮೂಲಕ ಆಧುನಿಕ ಜಗತ್ತಿನ ದುರಾಶೆ, ಪ್ರಕೃತಿನಾಶಕ್ಕೆ ಕಾರಣವಾದ ಸ್ವಾರ್ಥ ಅವನ ವಿನಾಶ ಇವುಗಳನ್ನು ಚಿತ್ರಿಸುತ್ತಾ ಹೋಗುತ್ತಾರೆ.

**ತೋಪು**

ಇದೊಂದು ನೀಳ್ಗತೆ. ಅನೇಕ ಸನ್ನಿವೇಶ, ಸಂದರ್ಭ ಘಟನಾವಳಿಗಳಿಂದ ಕೂಡಿದ್ದು, ಒಂದರೊಳಗೊಂದು ಬೆಸೆದುಕೊಂಡಿದ್ದು ಪುಷ್ಟಿಕೊಡುತ್ತಾ ಕಥೆಯ ನಡೆಗೆ ಸಾಗುತ್ತದೆ. ಒಂದು ಊರಿನ ಆಗುಹೋಗುಗಳಿಂದ, ಸಾಮಾಜಿಕ, ಧಾರ್ಮಿಕ, ರಾಜಕೀಯ ಕ್ಷೇತ್ರಗಳು ಹಾಗೂ ಭಾವನಾತ್ಮಕ ಸಂಬಂಧಗಳು, ಸಂವೇದನೆಗಳು ಪಾತ್ರಗಳ ಮೂಲಕ ಬಿತ್ತರಗೊಂಡಿದೆ.

ಆತ್ಮೀಯ ಭಾವನಾತ್ಮಕ ಸಂವೇದನೆ ಮಾತ್ರವಲ್ಲದೆ ಪರಿಸರ ಕಥೆಯೆಂದು ತಿಳಿಯಬಹುದು. ಜನಜೀವನ, ಆಗುಹೋಗುಗಳು, ಭೂತಕಾಲ, ವರ್ತಮಾನ, ಭವಿಷ್ಯತ್ತಿನ ಕ್ರಿಯಸ್ವರೂಪದ ನಿಲುವು, ಸಮಸ್ಯೆಯ ಹುಟ್ಟು, ಬೆಳವಣಿಗೆ ವಿಸ್ತಾರತೆಯಲ್ಲಿ ವ್ಯಕ್ತಿಯೊಬ್ಬನು ಸ್ಪಂದಿಸುವ ನೆಲೆ ಇದಾಗಿದೆ.

ಗ್ರಾಮೀಣ ಪರಿಸರ ಚಿಂತನೆಗಳಲ್ಲಿ ಆರೋಗ್ಯಗರ ಮನಸ್ಥಿತಿಯು ನಗರೀಕರಣಕ್ಕೆ ಪರಿವರ್ತಿತಗೊಳ್ಳುವಂತಹ ಸಂದರ್ಭದಲ್ಲಿ ಮತ್ತು ರಾಜಕೀಯತೆ ನುಸುಳಿ ಅನೇಕ ಸಮಸ್ಯೆಗಳಿಗೆ ದಾರಿಮಾಡಿಕೊಡುವುದು.

ದಲಿತ ಸಂವೇದನೆಯಲ್ಲಿ ಲೇಖಕರು ಪ್ರತಿನಿಧಿಯಾಗಿ, ನಿರೂಪಕನಾಗಿ, ಪಾತ್ರದಾರಿಯಾಗಿಯೂ ಮೂರು ಪಾತ್ರಗಳಲ್ಲಿ ಕಂಡು ಕೊಂಡಿದ್ದಾರೆ. ಜನಪದ ತಂತ್ರವನ್ನು ಈ ಕಥೆಯಲ್ಲಿ ಗುರುತಿಸಬಹುದು. ಕಥೆಗಾರ ಮಕ್ಕಳಿಗೆ ತಾವು ಕೇಳಿದ, ನೋಡಿದ, ಅನುಭವಿಸಿದ ಸಂದರ್ಭಗಳನ್ನು ಕಥಾತ್ಮಕವಾಗಿ ಹೇಳುತ್ತಿರುವುದು, ನೋವು, ದುಃಖ, ಅಸಹಾಯಕತೆ, ತೊಂದರೆ, ಕಷ್ಟ, ದುರಂತ ಮಾತ್ರವಲ್ಲ; ವಿದ್ಯಾಭ್ಯಾಸ ಪಡೆದದ್ದು, ತಾರ್ಕಿಕವಾಗಿ ಆಲೋಚಿಸಬಲ್ಲ ಸಾಮರ್ಥ್ಯವಿದ್ದದ್ದು, ಓದು, ವಿದ್ಯಾವಂತರು ಎಂಬುದು ಘನತೆಯ, ಪ್ರತಿಷ್ಠೆಯ, ಸಂಕೇತವಾಗಿದ್ದರೂ ಎಲ್ಲಾ ಸಂದರ್ಭದಲ್ಲೂ ಬೆಲೆ ದೊರೆಯುವುದಿಲ್ಲವೆಂಬುದು, ಒಂದು ಘಟನೆಯಿಂದ ನಿರೂಪಿತಗೊಂಡಿರುವುದನ್ನು ಕಾಣಬಹುದು.

ಈ ತೋಪು ಕಥೆಯು ಒಂದು ಗ್ರಾಮೀಣ ಪ್ರದೇಶದ ಸಂಸ್ಕೃತಿಯ ಕಥಾನಕ ಎಂದು ಹೇಳಬಹುದು. ನಿರೂಪಾತ್ಮಕ ವಿಧಾನವಿದ್ದರೂ ಅನುಭವಗಳನ್ನು ಚಿತ್ರವನ್ನು ರಚಿಸುವಂತಹ ಕಲ್ಪನಾ ಅಭಿವ್ಯಕ್ತ ಕ್ರಿಯೆಯಾಗಿರುವುದು. ಒಂದು ಪರಿಸರದ ಕಥೆ. ಇಲ್ಲಿ

ಪರಿಸರ ಎಂದರೆ ಮರಗಳ ಸಂಪತ್ತು, ಜೀವಕುಲಗಳ ಸಂಪತ್ತು. ಒಂದೊಂದು ಮರವು ಒಂದೊಂದು ಜೀವದ ಆತ್ಮ, ಉಸಿರು, ಜೀವ ಕಂಡ ಬದುಕಿನ ಕಥೆಯನ್ನು ಹೇಳುವ ನೆನೆಪು ಮಾಡಿಕೊಳ್ಳುವಂತಹ ಮಹತ್ವ ಪೂರ್ಣವಾದವು.

ಅಜ್ಜಿಯು ಮೊಮ್ಮಕ್ಕಳಿಗೆ ಕಥೆ ಹೇಳುವುದು. ಬಿಲ್ವಪತ್ರೆಮರ ಹೇಗಾಯಿತು ಎಂಬುದು ಪೌರಾಣಿಕ ಮತ್ತು ಸಾಮಾಜಿಕ ವರ್ಗ, ವರ್ಣ ತಾರತಮ್ಯತೆಯ ನೆಲೆಯು, ಭಾವನಾತ್ಮಕ ಬೆಲೆಯಿಲ್ಲದ, ಮನ್ನಣೆ ನೀಡದ ಸಾಮಾಜಿಕ, ಧಾರ್ಮಿಕ ಮೌಲ್ಯಗಳ ಬಗ್ಗೆ ಪ್ರಶ್ನಿಸುವಂತೆ ಕಥೆಯು ಮಾರ್ಮಿಕವಾಗಿ ಚಿತ್ರರಗೊಂಡಿದೆ.

ಬ್ರಾಹ್ಮಣ ಹೆಣ್ಣು ಪ್ರತಿನಿತ್ಯ ಹೂ ಹಣ್ಣುಗಳ ಪಡೆಯಲು ಕಾಡಿಗೆ ಹೋದದ್ದು, ಒಬ್ಬ ಭಿಕ್ಷುಕ ಕಂಡದ್ದು, ಆತ ಪ್ರತಿನಿತ್ಯ ಪ್ರೇಮಭಿಕ್ಷೆಯನ್ನು ಬೇಡಿದ್ದು, ಒಮ್ಮೆ ಪೂಜೆಸಲ್ಲಿಸಿದ ಹೂಗಳನ್ನು ಭಿಕ್ಷುಕನ ಪಾತ್ರೆಗೆ ಸುರಿದಿದ್ದು, ಮುಂಗೈ ಹಿಡಿದಿದ್ದು, ಆತನನ್ನು ಅಗ್ರಹಾರಕ್ಕೆ ಕರೆತಂದದ್ದು ಅಲ್ಲಿ ಯಾರು ಒಪ್ಪದೆ ತಿರಸ್ಕರಿಸಿದ್ದು, ಬಹಿಷ್ಕಾರಿಸಿದ್ದು, ಇದರಿಂದ ಅವಮಾನವೆಂದು ತಿಳಿದು ಕೊಂಡಿದ್ದು, ಆ ಹೆಣ್ಣು ಹಠವಾದಿಯಾಗಿದ್ದು ಶಾಶ್ವತವಾಗಿ ಪ್ರತಿಯೊಬ್ಬರು ಉಪಯೋಗಿಸುವಂತಹ ಪ್ರಯೋಜನಕ್ಕೆ ಬರುವಂತಹ ಕಾರ್ಯ ನಿರ್ವಹಿಸಬೇಕೆಂದು ಆಲೋಚಿಸಿದ್ದು, ಇಬ್ಬರು ಗಾಢವಾಗಿ ಅಪ್ಪಿಕೊಂಡದ್ದು, ದೇಹವನ್ನು ಕೂಡಿಸಿ ಕೊಂಡದ್ದು, ಎಲ್ಲಾ ದೈವಗಳಲ್ಲೂ ಪ್ರಾರ್ಥನೆ ಸಲ್ಲಿಸಿದ್ದು, ಪ್ರಾಣ ಬಿಟ್ಟದ್ದು, ಸೂರ್ಯ ಮೂಡುವಾಗ ಆ ಅಗ್ರಹಾರದ ಮಧ್ಯಭಾಗದಲ್ಲಿ ದೊಡ್ಡ ಬಿಲ್ವಪತ್ರೆಯ ಮರ ಬೆಳೆದು ಹೂವು ಕಾಯಿ ತುಂಬಿ ನಿಂತಿದ್ದು ಆಶ್ಚರ್ಯ.

ಆ ಹಾರುವ ಹೆಣ್ಣುಮಗಳು ಮತ್ತು ಆಕೆಯ ಪ್ರಿಯಕರ ಒಬ್ಬರೊಳಗೆ ಒಬ್ಬರು ಸೇರಿ ಮರವಾಗಿ ಹುಟ್ಟಿದ್ದು, ಆ ಮರದ ಬಿಲ್ಪತ್ರೆ ಕಾಯಿಗಳಲ್ಲಿ ಅವಳ ಜೀವವಿದ್ದೂ ಅಶರೀರವಾಣಿಯು, ಈ ಮರದ ಪತ್ರೆಗಳನ್ನು ಪೂಜೆಗೆ ಉಪಯೋಗಿಸಬೇಕೆಂದು ಹೇಳಿದ್ದನ್ನು ಒಪ್ಪಿಕೊಂಡು ಅಂದಿನಿಂದ ಬಿಲ್ವಮರವು ಪವಿತ್ರವೆಂದು ಒಪ್ಪಿಕೊಂಡಿದ್ದು, ಇದು ಅಜ್ಜಿ ಮೊಮ್ಮಕ್ಕಳಿಗೆ ಹೇಳಿದ ಕಥೆ ಇದು ಅಜ್ಜಿಯು ವಿಶೇಷವಾಗಿ ಒಪ್ಪಿದ ಪ್ರೀತಿಸುವ ಮರವಾಗಿತ್ತು.

ಹೀಗೆ ಆಲೂರಲ್ಲಿ ಮನುಷ್ಯನು ಸತ್ತರೆ ಆತನ ಹೆಸರಲ್ಲಿ ಒಂದು ಮರನೆಡುವ ಪದ್ಧತಿ. ನಂಬಿಕೆಯ ಆಧಾರದಿಂದ ಹಸಿರು ಸಂಪತ್ತು ಬೆಳೆದದ್ದು ಎಲ್ಲವೂ ದೈವವೆಂಬ ನಂಬಿಕೆಯು

ಧಾರ್ಮಿಕ ಭಾವನೆಯನ್ನು ಬೆಳೆಸಿತು. ಅಷ್ಟೆ ಅಲ್ಲ ಹಸುರು ಬೆಳೆ ಪರಿಸರದ ಕಾಳಜಿಯನ್ನು ಗುರಿತಿಸಬಹುದು.

ಪರಿಸರದ ಕಥೆಯೆಂದು ಒಂದು ಕಡೆ ಗುರುತಿಸಿದರೆ, ಇನ್ನೊಂದು ಕಡೆ ಗ್ರಾಮೀಣ ಪರಿಸರದ ಜೀವಂತ ಸಂಸ್ಕೃತಿಯ ಚಿಂತನೆಗಳು, ಮನುಷ್ಯರ ನಡುವಳಿಕೆಯ ಕ್ರಿಯೆಗಳನ್ನು ಈ ಕಥೆಯಲ್ಲಿ ಗುರುತಿಸಬಹುದು. ಅಮೂರ್ತದ ಕಥೆಯೊಂದಿಗೆ ಮೂರ್ತರೂಪದ ಜೀವನ ಜೀವಂತಿಕೆಯು ಈ ಕಥೆಯಲ್ಲಿ ಸೇರಿಕೊಂಡಿದೆ. ಕಥೆಯ ಸ್ವರೂಪ ವಿಸ್ತಾರತೆಯನ್ನು ಮಾತ್ರವಲ್ಲ ಗ್ರಾಮೀಣ ಜೀವನ ಸಂಸ್ಕೃತಿಯ ಚಿಂತನೆಯನ್ನು ಬಿತ್ತರಗೊಳಿಸುತ್ತದೆ.

ಪುರುಷ ಪ್ರಧಾನ ಸಮಾಜ ಎಂದು ಹೇಳಬಹುದಾದರೂ ತಾಯವ್ವನ ಪಾತ್ರವು ಪ್ರಮುಖವು ವಿಶೇಷವು ಆಗಿ ಬೆಳೆದಿರುವುದು. ತಾಯವ್ವ ಹೋಟೆಲ್ ಉದ್ಯಮಿಯಾಗಿದ್ದು, ಆರ್ಥಿಕ ಸ್ವಾತಂತ್ರ್ಯವನ್ನು ಪಡೆದವಳಾಗಿದ್ದಳು. ಇದು ಸರಿಸಮಾನತೆ, ದುಡಿಮೆಯ ಧರ್ಮದ ವಿಶೇಷತೆಯನ್ನು ಸಾದರಪಡಿಸುತ್ತದೆ.

ತಾಯವ್ವನ ಸೌಂದರ್ಯವೇ ಒಂದರ್ಥದ ಬಂಡವಾಳ. ಅದರೊಂದಿಗೆ ಆಕೆಯ ಮಗಳು ಊರ್ವಶಿಯ ಸೌಂದರ್ಯವೂ ಸೇರಿಕೊಳ್ಳುತ್ತದೆ. ಪ್ರೇಮ ಪತ್ರದ ಪ್ರಕರಣ ತಾಯವ್ವನ ಹೋಟೆಲಿನ ಮೇಲೆ ನಡೆಯುವ ಯುವ ಜನರ, ಹುಲಿವೇಷದಾರಿಯರ ಮತ್ತು ಇತರರು ನೆಡೆಸುವ ಧಾಳಿ, ಅದರಿಂದ ಆದ ನಷ್ಟ, ಅವಮಾನಕ್ಕೆ ಗುರಿಯಾದದ್ದು, ಪ್ರೇಮ ಪತ್ರದ ಪ್ರಕರಣದಲ್ಲಿ ಗೌಡರ ನೆರವು ಪಡೆದು ನಿರೂಪಕನ ಮೇಲೆ ಅನೈತಿಕತೆಯ ಆರೋಪ ಹೊರಿಸಿದ್ದು, ನಿರೂಪಕರ ಕನಸುಗಳು ಅವಸನಕ್ಕೆ ಗುರಿಯಾದದ್ದು ಹೀಗೆ ಅನೇಕ ಪ್ರಸಂಗಗಳು ಪೋಷಕವಾಗಿದ್ದು ಒಂದು ಜನಪದ ಸಂಸ್ಕೃತಿಯನ್ನೆ ಬಿಚ್ಚಿದೆ.

ಈ ಕಥೆಯು ರೂಪುಗೊಂಡಿರುವುದು ಜನಪದ ಪ್ರೇರಣೆಯಿಂದಲೇ. ಕಥೆಯ ಶೈಲಿ, ತಂತ್ರದ ಮೂಲವು ಕೂಡ ಅಲ್ಲಿಯದೆ. ಸಾಮಾಜಿಕ, ರಾಜಕೀಯ ಪರಿಸರಗಳೊಂದಿಗೆ ಭಾವಜೀವಿಗಳ ಮಾನಸಿಕ ದೂರವನ್ನು ಕುರಿತು ಈ ಕಥೆಯಲ್ಲಿ ಚಿಂತಿಸಿದೆ.

ಕಥೆಯ ಓಟದಲ್ಲಿ ಪಾತ್ರಗಳ ಚಿತ್ರಣ, ವಿಸ್ತರತೆಯು ನೆಡೆಯುತ್ತಿದ್ದಂತೆ ಕೆಲವು ಕಡೆ ವಿಮರ್ಶಾ ಮನೋಭಾವವು ವ್ಯಕ್ತಗೊಂಡಿರುವುದು ಹಾಗೆಯೇ ತಾರ್ಕಿಕ ನೆಲೆಯು ಕೂಡ ಅಭಿವ್ಯಕ್ತಿಗೊಂಡಿದೆ. ಅಂದರೆ ಸೃಜನಶೀಲ ನೆಲೆಯಲ್ಲಿ ಸಂವೇದನೆಯ ಕ್ರಿಯೆಯೊಂದಿಗೆ ತರ್ಕ, ಚರ್ಚೆ, ವಿಮರ್ಶೆಯ ಮನೋಧರ್ಮವು ಬೆಸೆದುಕೊಂಡಿದೆ.

ಇಷ್ಟೆಲ್ಲಾ ಇದ್ದರೂ " ಇಂದಲ್ಲ ನಾಳೆ, ನಾಳೆಯಲ್ಲ ನಾಡಿದ್ದು ನಾಡಿದ್ದಲ್ಲ ಆಚೆ ನಾಡಿದ್ದು ಅಥವಾ ಮುಂದೊಂದು ಕಾಲಕ್ಕೆ ಇನ್ನೊಂದು ಯುಗಕ್ಕೆ ಇಲ್ಲವೇ ಇನ್ನೆಂದೋ ಒಂದು ದಿನ ಆ ಒಂದು ಕ್ಷಣಕ್ಕಾದರು ಇಂತಹ ಎಲ್ಲ ವಿಕೃತಿಗೂ ಒಂದು ಸಮಯ ಬಂದೇ ಬರುತ್ತದೆ. ಎಲ್ಲ ವಿನಾಶಕ್ಕೂ ಒಂದು ಅಂತಿಮ ದಿನವಿರುತ್ತದೆ. ಆವರೆಗೆ ಕಾಯಲು ನನ್ನಿಂದಗದಿದ್ದರೂ ಯಾರಾದರೂ ಕಾಯುತ್ತಾರೆ. ಬರಬೇಕಾದವರು ಬಂದೇ ಬರುತ್ತಾರೆ" ( ಮೊಗಳ್ಳಿ ಗಣೇಶ್ - ಮೊಗಳ್ಳಿ ಕಥೆಗಳು, ಪುಟ ೩೩೮)ಎನ್ನುವ ಮಾತುಗಳು ಮುಂದೆ ಒಳ್ಳೆಯಕಾಲ ಬಂದೇ ಬರುತ್ತದೆ ಎನ್ನುವ ಬರವಸೆಯದಾಗಿದೆ.

**ಭೂಮಿ**

ಈ ಕಥೆಯ ನಾಯಕ ಒಬ್ಬ ದೊಂಬ. ಅವನ ಕಾಯಕ ಆಟ, ಮೋಡಿ ಮಾಡುವುದು. ಇದೊಂದು ಕಲಾತ್ಮಕತೆಯ ಚಟುವಟಿಕೆ. ಇವನೊಬ್ಬ ಅತಿಮಾನುಷ ಶಕ್ತಿಯುಳ್ಳ ವ್ಯಕ್ತಿ. ರೆಕ್ಕೆ ಇಲ್ಲದೆಯು ಹಾರುವ ಶಕ್ತಿಯುಳ್ಳವನು, ಅವನೊಳಗೆ ಅವನ ಪೂರ್ವಿಕರು ಸೇರಿಕೊಂಡಿದ್ದರು.

ತಾಯಿಯ ಧ್ವನಿಯಂತೆ ಕೇಳಿಬರುವ ಒಂದು ಮಾನಸಿಕ ಸ್ಥಿತಿ. ಇದು ಕನಸು ಎಂದೋ ಅಥವಾ ಭ್ರಮೆ ಎಂದೋ ಹೇಳಬಹುದು. ಕಥೆಗಾರರ ದೃಷ್ಟಿಯಲ್ಲಿ ಪ್ರಕೃತಿಮಾತೆಯಾಗಿ ಧ್ವನಿ ನೀಡಿದ್ದು, ಪ್ರೀತಿಯಿಂದ, ಅಕ್ಕರೆಯಿಂದ ಹೀಗೆ ಕರೆಯುವ ಧ್ವನಿಯಲ್ಲಿ ಭಾವನಾತ್ಮಕ ಸಂಬಂಧವನ್ನು ರೂಪಿಸುವಂತದಾಗಿದ್ದು, ಸೃಷ್ಟಿಯ ಕ್ರಿಯಾವ್ಯಾಪಾರದ ನೆಲೆಯನ್ನು ಗುರುತಿಸಬಹುದು.

ರಾಜಕೀಯ:- ಏಳುಹಳ್ಳಿಗೆ ಒಬ್ಬ ಪಾಳೆಯಗಾರ. ದೊಂಬ ಮತ್ತು ಪಾಳೆಗಾರ ನಡುವೆ ನಡೆಯುವ ಪ್ರತಿಭಾ ಸ್ಪರ್ಧೆ. ದೊಂಬನಿಗೆ ಇದ್ದ ರಂಜಕ ಆಟ ಕಲಾತ್ಮಕತೆಗೆ ಜನ ಆಕರ್ಷಣೆಗೆ ಕಾರಣವಾಗಿತ್ತು. ಪಾಳೆಗಾರನಿಗೆ ದೊರೆಯದ ಮನ್ನಣೆಯ ಬಗ್ಗೆ ಅವನಿಗೆ ಚಿಂತೆ ಇದರಿಂದ ಅಸೂಯೆಯುಂಟಾಗಿ ದೊಂಬನಿಗೆ ಕರೆಕಳುಹಿಸುತ್ತಾನೆ. ಪಾಳೆಗಾರನ ಬಳಿಗೆ ಹೋಗದೆ ಇದ್ದದ್ದು, ಇದರಿಂದಾಗಿ ಪಾಳೆಗಾರನ ಕೋಪಕ್ಕೆ ಗುರಿಯಾಗುವಂತೆ ಮಾಡುತ್ತದೆ. ಪಾಳೇಗಾರ ದೊಂಬನಿಗೆ ಸವಾಲು ಹಾಕುತ್ತಾನೆ. ಸವಾಲನ್ನು ಸ್ವೀಕರಿಸಿ ಅದಕ್ಕೆ ಪ್ರತಿಫಲವನ್ನು ಅಪೇಕ್ಷಿಸುತ್ತಾನೆ. ದೊಂಬ ಪರೀಕ್ಷೆಯಲ್ಲಿ ಗೆಲ್ಲುತ್ತಾನೆ. ಆದರೆ ಪಾಳೆಗಾರ ಮಾತುಕೊಟ್ಟಂತೆ ನಡೆಯದೆ ಅಸಡ್ಡೆ ಉದಾಸೀನದ ಭಾವನೆಯನ್ನು ವ್ಯಕ್ತಪಡಿಸುತ್ತಾನೆ.

ಅವಮಾನ, ಕೋಪಕ್ಕೆ ಗುರಿಯಾದ ದೊಂಬ ಭೂಮಿಯಲ್ಲಿ ಬೇರು ಬಿಡುತ್ತಾನೆ. ಇದು ಸಾಧ್ಯ ಅಸಾಧ್ಯತೆಯ ನಡುವೆ ನಡೆಯುವ ಕ್ರಿಯೆ.

ಶಾಪ:- ಗಂಡನನ್ನು ಕಳೆದು ಕೊಂಡ ಹೆಂಡತಿಯು ಅನಾಥಳಾಗಿ ಕೋಪದಿಂದ ಪಾಳೇಗಾರನಿಗೆ ಶಾಪ ಹಾಕುತ್ತಾಳೆ. ಆಸೆಯನ್ನು ಸುಟ್ಟು ಹಾಕಿದ ಪಾಳೆಗಾರರ ಮೇಲೆ ಅತೀವ ಕೊಪದಿಂದ ಈ ಸ್ಥಳದಲ್ಲಿ ಹಸಿರಾಗಲಿ, ಮರಗಳಾಗಲಿ ಬೆಳೆಯದೆ ಪಕ್ಷಿಗಳಿಗೆ ಆಹಾರವಿಲ್ಲದೆಯೂ, ಯಾವ ಮನುಷ್ಯನು ಈ ಪ್ರದೇಶದಲ್ಲಿ ವಾಸಮಾಡದಂತಾಗಲಿ ಎಂದು ಶಾಪ ಹಾಕಿದಳು. ತ್ಯಾಗ ಬಲಿದಾನ ವೀರತ್ವದ ನೆಲೆಯನ್ನು ಇಲ್ಲಿ ನಾವು ಗುರುತಿಸಬಹುದು. ವಾಸ್ತವತೆಯಲ್ಲಿ, ಅಸಾಧ್ಯವಾದದ್ದು ಕಲ್ಪನೆಯಲ್ಲಿ, ಕನಸಿನಲ್ಲಿ ನಡೆಯಬಹುದು. ಭ್ರಮೆಯ ಸ್ಥಿತಿಯು ದುರಂತತೆಯನ್ನು ಹೊಂದುವುದು.

ದೊಂಬನಿಗಿದ್ದ ಆಸೆ ಎಂದರೆ ತನ್ನದೆ ಆದ ಜಾಗ, ಒಂದು ಮನೆ, ಕುಟುಂಬ ಒಂದಾಗಿ ಒಂದು ಕಡೆ ಜೀವಿಸ ಬೇಕೆಂಬುದು. ಅಲೆಮಾರಿಯಾದ ಬದುಕು ಬೇಡವೆಂಬುದು. ಆ ಕಾರಣಕ್ಕಾಗಿಯೆ ಈ ಪಣಕ್ಕೆ ಒಪ್ಪಿಕೊಂಡದ್ದು, ಮಾತಿನಂತೆ ನಡೆದು ಕೊಂಡದ್ದು, ಆದರೆ ಪಾಳೆಗಾರ ತನ್ನ ಅಸ್ತಿತ್ವಕ್ಕೆ ದಕ್ಕೆ ಒದಗಿ ಬಂದದ್ದನ್ನು ಗಮನಿಸಿ ದೊಂಬನಿಗೆ ಮೋಸಮಾಡಿದನು. ಅಸೂಯೆ ಎಂಬುದು ವ್ಯಕ್ತಿಯ ವ್ಯಕ್ತಿತ್ವವನ್ನೇ ಬದಲಾಯಿಸಲು ಸಾಧ್ಯ ಎಂಬುದು ಇದರಿಂದ ಗೊತ್ತಾಗುತ್ತದೆ. ಆಸೆಗಳು ಮಣ್ಣಲ್ಲಿ ಮಣ್ಣಾದ ಬಗೆಯನ್ನು ನಾವು ಇಲ್ಲಿ ಗುರುತಿಸಬಹುದು.

ಈ ಕಥೆಯ ತಂತ್ರವು ಜಾನಪದ ಕಥನಕಾವ್ಯ ಮಾದರಿಯನ್ನು ಪಡೆದು, ಪಾತ್ರಗಳ ಮುಖಾಂತರ ಮನೋಭೂಮಿಕೆಯ ಛಲ; ಮಾಯಾಜಾಲವಾದರೂ ಆತ್ಮವಿಶ್ವಾಸದ ನೆಲೆಯನ್ನು ಹಾಗು ಬಣ್ಣ ಬಣ್ಣದ ಕನಸುಗಳು ಮಾಯವಾದ ವಾಸ್ತವಿಕ ಗ್ರಾಮೀಣ ಐತಿಹಾಸಿಕ ಗುಣವುಳ್ಳ ಕಥೆಯೆಂದು ಹೇಳಬಹುದು.

ಈ ಕಥೆಯಲ್ಲಿ ದೊಂಬ ಶೋಷಿತ ಜನರ ಪರವಾಗಿ ಕಂಡು ಬರುತ್ತಾನೆ. ಅವನ ಆಸೆ ಕನಸುಗಳು ಶೋಷಿತರ ಕನಸುಗಳಂತೆ ಕಂಡು ಬರುತ್ತವೆ. ಪಾಳೆಗಾರ ಶೋಷಕರ ಪರವಾಗಿ ಕಂಡು ಬರುತ್ತಾನೆ. ದೊಂಬನನ್ನು ಸೋಲಿಸುವುದರ ಮೂಲಕ ದುರ್ಬಲರನ್ನು ತನ್ನ ಹಿಡಿತದಲ್ಲಿ ಇಟ್ಟುಕೊಳ್ಳುವಂತಹ ಪ್ರಯತ್ನವನ್ನು ನಾವು ಇಲ್ಲಿ ಕಾಣಬಹುದು. ಆದರೆ ಪಾಳೆಗಾರನ ಸ್ವಾರ್ಥಕ್ಕಿಂತ ದೊಂಬನ ಕಸನು ತುಂಬ ಶಕ್ತಿ ಶಾಲಿಯಾಗಿತ್ತು. ಅಲ್ಲದೆ

ಅವನಲ್ಲಿ ಯಾವುದೇ ವಂಚನೆ ಇರಲಿಲ್ಲ ಅಷ್ಟೇ ಅಲ್ಲದೆ ಅವನ ಜೊತೆಯಲ್ಲಿ ಅವನ ಪೂರ್ವಿಕರಿದ್ದರು ಇದರಿಂದಾಗಿ ದೊಂಬ ತನಗೆ ಸವಾಲನ್ನು ಗೆಲ್ಲಲ್ಲು ಸಾಧ್ಯವಾಯಿತು. ಆದರೆ ಪಾಳೆಗಾರನು ವಂಚಕನು ಸ್ವಾರ್ಥಿಯೂ ಆದ್ದರಿಂದ ಅವನು ಒಡ್ಡಿದ ಸವಾಲಿನಲ್ಲಿ ಅವನು ಗೆಲ್ಲಲು ಸಾಧ್ಯವಾಗಲಿಲ್ಲಿ.

ಪಾಳೇಗಾರನಿಗೆ ಬುದ್ಧಿಕಲಿಸುವ ಸಲುವಾಗಿ, ಅಲ್ಲದೆ ನಿಜವಾದ ಮಣ್ಣಿನ ಮಕ್ಕಳು ದುರ್ಬಲ ವರ್ಗದವರೆಂದು ತೋರಿಸಲು ದೊಂಬ ಮಣ್ಣಿನಲ್ಲಿ ಬೆರೆತು ಹೋಗುತ್ತಾನೆ ಆದರೆ ಅವನು ಭೂಮಿಯಲ್ಲಿ ಬೆರೆಯುವುದನ್ನು ತಪ್ಪಿಸಲು ಪಾಳೇಗಾರನಿಂದ ಸಾಧ್ಯವಾಗುವುದಿಲ್ಲ. ಪಾಳೇಗಾರನ ಸೋಲು ಮೇಲ್ವರ್ಗದವರ ಸೋಲು ಕೊಡ ಆಗಿದೆ. ನಿಜವಾಗಲೂ ಬಡವರ, ದಲಿತ ಕನಸುಗಳನ್ನು ನಾಶಮಾಡಲು ಯಾರಿಂದಲು ಸಾಧ್ಯವಿಲ್ಲ ಎಂಬುದು ಇದರಿಂದ ತಿಳಿಯುತ್ತದೆ.

**ಕಾಳಗದ ಹುಂಜ**

ಈ ಕಥೆಯಲ್ಲಿ ಜನಪದ ಆಟವಾದ ಕೋಳಿ ಕಾಳಾಗವನ್ನು ಬಳಸಿ ಕೊಂಡು ಸ್ಪರ್ಧೆ, ಮನುಷ್ಯನ ಸೋಲು, ಸೋಲನ್ನು ಸ್ವೀಕರಿಸಲಾರದ ಮನಸ್ಥಿತಿ, ಅವಮಾನ, ಸೋಲು ಮನುಷ್ಯನಲ್ಲಿ ಉಂಟುಮಾಡುವ ಕ್ರೌರ್ಯದ ಸ್ಥಿತಿ, ಕ್ರೌರ್ಯದಿಂದಾಗಿ ಮನುಷ್ಯ ತನ್ನ ವಿವೇಚನೆಯನ್ನು ಕಳೆದು ಕೊಂಡು ನಡೆದು ಕೊಳ್ಳುವ ಪರಿ, ಮನುಷ್ಯತ್ವವನ್ನು ಮರೆತು ರಾಕ್ಷಸ ಪ್ರವೃತ್ತಿಯನ್ನು ಮೆರೆದದ್ದು, ಮಗುವಿನ ಮುಗ್ಧಮನಸ್ಥಿತಿ, ಬದುಕಿನ ಅತಂತ್ರ ಸ್ಥಿತಿ ಇದೆಲ್ಲವನ್ನು ಹೇಳುತ್ತಾ ಹೋಗುತ್ತಾರೆ.

**ಈ ಮೇಳಕ್ಕುಂಟೇನಯ್ಯ ಕೊನೆ**

ಈ ಕಥೆಯು ಸಂಪೂರ್ಣವಾಗಿ ಜನಪದ ಪ್ರಭಾವದಿಂದ ರಚಿತವಾಗಿದೆ. ಇಲ್ಲಿ ಬದುಕು ಮತ್ತು ಮೇಳ ಅಭೇಧ್ಯ ಮಾಡಲು ಸಾಧ್ಯವಿಲ್ಲ. ಒಂದು ಕಥೆಯೊಳಗೆ ಮತ್ತೊಂದು ಕಥೆ. ಸಂದರ್ಭ ಮತ್ತು ಸನ್ನಿವೇಶಗಳನ್ನು ಆಧರಿಸಿ ಮೂಲತಃ ಕಥೆಗಳು ನಿರೂಪಣೆಯಾಗುತ್ತಾ ಹೋಗುತ್ತದೆ. ಅಮೂರ್ತ ನೆಲೆಗಟ್ಟು, ಕಲ್ಪನೆ, ನಿರ್ಜೀವ ವಸ್ತುಗಳನ್ನು ಮಾತಾಡಿಸುವುದರ ಮೂಲಕ ಕಥೆಗೆ ಜೀವ ತುಂಬುತ್ತಾ ಹೋಗುತ್ತಾರೆ. ಈ ಕಥೆಯಲ್ಲಿ ಶೋಷಿತರ ಪರವಾಗಿ ಗಾಳಿ, ಭೂಮಿ, ನೀರು ಕೂಡ ದನಿ ಎತ್ತುತ್ತವೆ. ಶತ ಶತಮಾನಗಳಿಂದ ಶೋಷಣೆಗೆ ಹಿಂಸೆಗೆ ಒಳಗಾದವರನ್ನು ಎಚ್ಚರಿಸುವ ಪ್ರಯತ್ನವನ್ನು

ಮಾಡಿದ್ದಾರೆ. ಕಾವ್ಯದ ಮೂಲಕವೆ ಬದಲಾದ ದಲಿತರ ಬದುಕನ್ನು ಬಿಚ್ಚಿಡುತ್ತಾ ಹೋಗುತ್ತಾರೆ. ಶತಮಾನಗಳೇ ಕಳೆದರು ಅವರ ಬದುಕು ನೋವು ಹಿಂಸೆ ಸೋಲುಗಳಲ್ಲೆ ಕಳೆಯುತ್ತಿದ್ದಾರೆ. ಪುರಾಣದ ನಾಯಕರು ದೇವರು, ದಿಂಡರು, ವೀರರು, ಶೂರರು, ಬಂದರು ಅವರ ಬದುಕು ಬದಲಾಗದೆ ಹಾಗೆಯೆ ಉಳಿದಿದೆ. ಮುಟ್ಟಿಸಿಕೊಳ್ಳದವರ ದುಃಖ, ಹಸಿವು, ನೋವು, ಪ್ರೀತಿಯನ್ನು ಕಳೆದುಕೊಂಡವರ ಸ್ಥಿತಿ, ದಲಿತ ಹೆಣ್ಣು ಮಕ್ಕಳ ಮೇಲೆ ನಡೆಯುತ್ತಿರುವ ಅತ್ಯಾಚಾರ, ಅದನ್ನು ತಡೆಯಲು ಬಂದ ಪಿಶಾಚಿ, ಪಿಶಾಚಿಯನ್ನು ಸೋಲಿಸುವ ಪ್ರಯತ್ನ, ಸೋಲಿಸಲಾಗದೆ ಅದರ ಜೀವವನ್ನು ಹುಡುಕ್ಕುತ್ತಾ ಹೊರಡುವ ಸರದಾರರು, ಸರದಾರರ ಮನಸ್ಥಿತಿ, ದಲಿತರ ಉದ್ಧಾರದ ಮಾತುಗಳನ್ನಾಡುವವರಿಗೆ ಶಿಕ್ಷೆ ನೀಡುವ ಪ್ರಯತ್ನ, ನಾಗರೀಕತೆಯ ಪ್ರವೇಶ, ಇದರ ಪರಿಣಾಮವಾಗಿ ದಲಿತರ ಬದುಕಿನಲ್ಲಿ ಸ್ವಲ್ಪ ಮಟ್ಟಿಗಿನ ಬದಲಾವಣೆ, ಹುಟ್ಟು ಸಾವುಗಳನ್ನು ನಿಯಂತ್ರಿಸಲು ಪ್ರಯತ್ನಿಸುವುದಾಗಿ ಹೇಳುವ ಸರದಾರರು, ಹಿಂಸೆ ಬೇಡವೆಂದು ಹೇಳುವ ಬುದ್ಧಿ ಮಾತುಗಳು, ದಲಿತರ ಜೊತೆಗೆ ನಿಸರ್ಗದ ನಾಶ, ದಲಿತರು ಸಿಡಿದುನಿಲ್ಲಲು ಪ್ರಯತ್ನಿಸುವುದು, ಅದನ್ನು ದಮನಿಸುವ ಪ್ರಯತ್ನ, ಮೇಳದ ಹಾಡಿಗೆ ಕೊನೆ ಇಲ್ಲದಂತೆ ದಲಿತರ ನೋವಿಗೂ ಕೊನೆಯಿಲ್ಲದಿರುವುದು ಇದೆಲ್ಲವನ್ನು ಈ ಮೇಳಕುಂಟೇನಯ್ಯ ಕೊನೆ ಎಂಬ ಕಥೆಯಲ್ಲಿ ಚಿತ್ರಿಸುತ್ತಾ ಹೋಗುತ್ತಾರೆ. ದಲಿತರ ನೋವಿಗೆ ಕೊನೆ ಎಂಬುದಿಲ್ಲ ಎಂಬುದನ್ನು ಈ ಮೂಲಕ ತೋರಿಸುವ ಪ್ರಯತ್ನ ಮಾಡಿದ್ದಾರೆ.

" 'ಈ ಮೇಳೆಕುಂಟೇನಯ್ಯ ಕೊನೆ' ತನ್ನ ಜಾನಪದೀಯ ಭಾಷೆ ಹಾಗೂ ಕಥನ ಶೈಲಿಗಳಿಂದಾಗಿ ಮಹತ್ವದ ಪ್ರಯೋಗವೆನಿಸಿಕೊಳ್ಳುತ್ತದೆ. ಈ ಕತೆಯಲ್ಲಿ ಇತಿಹಾಸ, ಪುರಾಣ, ಕಾವ್ಯಗಳು ಒಟ್ಟಾಗಿ ಮೇಳವಿಸಿ ಪ್ರಕೃತಿಯನ್ನು ಒಳಗೊಂಡ ಒಂದು ಸಾಮರಸ್ಯದ ದರ್ಶನವನ್ನು ಸಾಕಾರಗೊಳಿಸುವತ್ತ ದುಡಿದಿವೆ. ಈ ಸಾಮರಸ್ಯದ ಕನಸು ಕ್ರಾಂತಿಯ ಮೂಲಕ ಸಾಧ್ಯವಾಗಬಲ್ಲದು ಎಂಬ ಸಂದೇಶವೂ ಕತೆಯಲ್ಲಿದೆ. ಕುಸುಮಬಾಲೆಯ ಮೂಲಕ ದೇವನೂರರು ತೆರೆದ ಅಭಿವ್ಯಕ್ತಿಯ ಮಾರ್ಗ ಮೊಗಳ್ಳಿಯವರಿಗೂ ಹೇಗೆ ಹೊಸ ಸಾಧ್ಯತೆಗಳನ್ನು ತೋರಿಸಿಕೊಟ್ಟಿದೆಯೆನ್ನುವುದಕ್ಕೆ ಈ ಕತೆ ಒಳ್ಳೆಯ ನಿದರ್ಶನವಾಗಿದೆ."
(ಆಮೂರ. ಜಿ. ಎಸ್. – ಕನ್ನಡ ಕಥನ ಸಾಹಿತ್ಯ : ಸಣ್ಣಕತೆ, ಪುಟ ೩೬೮)

## ೩.೨ ಭಾಷೆ

ಮೊಗಳ್ಳಿ ಗಣೇಶ್ ರವರು ತಮ್ಮ ಕಥೆಗಳಲ್ಲಿ ಕಥೆಗಳ ಬೆಳವಣಿಗೆಗೆ ಅನುಗುಣವಾದ ಭಾಷೆಯನ್ನು ಬಳಸಿಕೊಂಡಿದ್ದಾರೆ. ಅವರ ಕಥೆಗಳು ಗ್ರಾಮೀಣ ಜನರ ಜೀವನವನ್ನು ಕುರಿತು ಚಿತ್ರಣಗಳನ್ನು ಚಿತ್ರಿಸುತ್ತಾ ಹೋಗುವದರಿಂದ ಸಂದರ್ಭಕ್ಕೆ ಅನುಗಣವಾದ ಭಾಷೆಯನ್ನು ಬಳಸಿಕೊಂಡಿದ್ದಾರೆ. ನಿರುಪಕರು ನಿರೂಪಣೆಗೆ ಅನುಗುಣವಾಗುವಂತೆ, ಪಾತ್ರದ ಯಥಾರ್ಥತೆಯ ಭಾಷಾ ಪ್ರಯೋಗವು ಅಭಿವ್ಯಕ್ತಗೊಂಡಿದೆ. ಮೊಗಳ್ಳಿ ಗಣೇಶ್ ರವರ ಕಥೆಗಳು ಪ್ರಮಾಣ ಭಾಷೆ ಮತ್ತು ಆಡು ಭಾಷೆಯ ಮಿಶ್ರಣದಿಂದ ಕೂಡಿದೆ ಆಧುನಿಕತೆ ಪ್ರತೀಕವಾಗಿ ಕೆಲವು ಕಡೆಗಳಲ್ಲಿ ಇಂಗ್ಲೀಷ್ ಭಾಷೆಯನ್ನು ಪಾತ್ರದ ಪೋಷಣೆಗೆ ಉಪಯೋಗಿಸಿ ಕೊಂಡಿದ್ದಾರೆ.

ಶವಯಾತ್ರೆ, ಮ್ಯಾರೇಜ್ ಮೂಸಿಯಂ, ತ್ತುತ್ತಿನ ಮರ, ಬತ್ತ ಈ ಕಥೆಗಳಲ್ಲಿ ಇಂಗ್ಲೀಷ್ ಭಾಷೆಯನ್ನು ಬಳಸಿಕೊಂಡಿದ್ದಾರೆ.

**ಬತ್ತ**

ಈ ಕಥೆಯಲ್ಲಿ ದಲಿತರ ಜೀವನದ ಪರಿಚಯ, ಅವರ ಜೀವನ ಶೈಲಿ, ರಾಜಕೀಯ, ಸ್ವಾರ್ಥ ತಮ್ಮ ಉಳಿವಿಗಾಗಿ ದಲಿತರ ಹೋರಾಟ ಜ್ಯಾತಿವೈಷಮ್ಯವನ್ನು ಚಿತ್ರಿಸಿದ್ದಾರೆ. ದಲಿತರ ಪರವಾಗಿ ತಹಸಿಲ್ದಾರರು ಮೇಲ್ವರ್ಗದವರ ಪ್ರತೀಕವಾಗಿ ಜಿಲ್ಲಾದಿಕಾರಿಗಳು ಬರುತ್ತಾರೆ. ಈ ಕಥೆಯ ಮುಖ್ಯ ವಸ್ತು ಬತ್ತ. ಅದರ ಸುತ್ತಲು ದಲಿತರ ಬದುಕು ಸ್ವಾರ್ಥ ಅವರ ಹೋರಟ ರಾಜಕೀಯ ಇದೆಲ್ಲಾವು ತೆರೆದು ಕೊಳ್ಳುತ್ತಾ ಹೋಗುತ್ತದೆ. ಅನಧಿಕೃತ್ಯವಾಗಿ ಕೆರೆಯ ಭೂಮಿಯನ್ನು ಬಳಸಿಕೊಂಡು ಬತ್ತ ಬೆಳೆದಿರುವವರ ವಿರುದ್ಧ ಸರ್ಕಾರಕ್ಕೆ ದೂರನ್ನು ವ್ಯಕ್ತಿಯೊಬ್ಬ ಮೂಗರ್ಜಿಯ ಮೂಲಕ ಕೊಡುತ್ತಾನೆ. ದಕ್ಷನಾದ ಯುವಕ ಅಧಿಕಾರಿಯು ಅವರ ವಿರುದ್ಧ ಕ್ರಮವನ್ನು ತೆಗೆದು ಕೊಂಡು ಬತ್ತವನ್ನು ಸರ್ಕಾರದ ಪರವಾಗಿ ಮುಟ್ಟುಗೋಲು ಹಾಕಿಕೊಳ್ಳಲು ಪ್ರಯತ್ನಿಸುತ್ತಾರೆ. ಆಗ ಅಲ್ಲಿಗೆ ಗದ್ದೆಯ ಮಾಲಿಕರು ಜಿಲ್ಲಾದಿಕಾರಿಗಳನ್ನು ತಮ್ಮ ಗದ್ದೆಯ ಬಳಿಗೆ ಕರೆದು ಕೊಂಡು ಬರುತ್ತಾರೆ. ಈ ಸಂದರ್ಭದಲ್ಲಿ ತಹಸಿಲ್ದಾರರು ಮತ್ತು ಜಿಲ್ಲಾದಿಕಾರಿಗಳು ಮುಖಾಮುಖಿಯಾಗಿ ಚರ್ಚೆಗೆ ಒಳಪಡುತ್ತಾರೆ. ಅವರ ಮಾತಿನ ಸಂಭಾಷಣೆಯನ್ನು ಇಂಗ್ಲೀಷ್ ಭಾಷೆಯ ಮೂಲಕ ಆಡಿಸುತ್ತಾರೆ. ತಹಸಿಲ್ದಾರರು ನಿರ್ಧಾರದ ದನಿಯಲ್ಲಿ ಬಾಯಿ ತೆಗೆದು 'No sir, I did it as legally'

ಎಂದರು. ಆ ಜಿಲ್ಲಾದಿಕಾರಿ ಸಾಕು ಬಾಯಿಮುಚ್ಚು ಎಂಬಂತೆ 'who said it is legal action. It is just a cruel action against peasent. I know what kind of idiot you are.' ಎಂದು ಗುಡುಗಿದರು.

**ಮ್ಯಾರೇಜ್ ಮ್ಯೂಸಿಯಂ**

ಈ ಕಥೆಯಲ್ಲಿ ವಿಕೃತ ಮನಸ್ಸಿನ ಗಂಡನ ಚಿತ್ರಣವನ್ನು ಕೊಡುತ್ತಾರೆ. ತನ್ನ ಮದುವೆಯ ಜೀವನವನ್ನು, ಖಾಸಗಿ ಬದುಕನ್ನು ಪ್ರದರ್ಶನಕ್ಕಿಡುವ ವ್ಯಕ್ತಿಯ ಮನಸ್ಥಿತಿಯ ಬಗ್ಗೆ ಹೇಳುತ್ತಾರೆ. ತನ್ನ ಸ್ವಾರ್ಥಕ್ಕಾಗಿ ಏನ್ನೆಲ್ಲಾ ನಾಟಕ ಮಾಡುವುದಕ್ಕು ಸಿದ್ಧವಾಗುವ, ಪ್ರೀತಿಯನ್ನು ಸ್ವಾರ್ಥಕ್ಕೆ ಬಳಸಿಕೊಳ್ಳುವುದರ ಬಗ್ಗೆ ಚಿತ್ರಿಸುತ್ತಾರೆ. ಈ ಕಥೆ ನೆನಪುಗಳ ಮೂಲಕ ಪ್ರಾರಂಭವಾಗಿ ನೋವು ಹತಾಶೆ ದುಃಖದಲ್ಲಿ ಅಂತ್ಯವಾಗುತ್ತದೆ. ಡೈವೋರ್ಸ್ ಪಡೆದು ಬೇರೆಯಾಗಿ ಏಳು ವರ್ಷಗಳ ನಂತರ ಪಾರ್ಟಿಯೊಂದಕ್ಕೆ ಹೆಂಡತಿಯನ್ನು ಕರೆಯುವುದರ ಮೂಲಕ ಅವಳಲ್ಲಿ ತನ್ನೆಲ್ಲಾ ಹಳೆಯ ನೆನಪುಗಳನ್ನು ಹೇಳಿಕೊಳ್ಳುವಂತೆ ಮಾಡುತ್ತಾನೆ. ಆಗ ಈ ರೀತಿಯ ಭಾಷೆಯನ್ನು ಬಳಸಿಕೊಳ್ಳುತ್ತಾನೆ. ತನ್ನ ಮನೆಗೆ ಅವಳನ್ನು ಕರೆದು ಕೊಂಡು ಹೋಗಿ ತಾನು ಅವಳನ್ನು ಎಷ್ಟು ಪ್ರೀತಿಸುತ್ತಾನೆ. ಎಂಬುದನ್ನು ಅವಳ ಜೊತೆಯಲ್ಲಿ ಇದ್ದಾಗ ನಡೆದಂತಹ ಘಟನೆಗಳ ನೆನಪನ್ನು ಮನೆಯಲ್ಲಿ ಹಾಗೆಯೆ ಉಳಿಸಿಕೊಂಡಿರುವುದನ್ನು ತೊರಿಸಿ ರಚಾನಾ ನನ್ನ ಕಡೆಗೆ ತಲೆ ಎತ್ತಿ ನೋಡು ನೀನು ಏನೇ ಮಾಡಿದ್ದರೂ ನಾನು ಅದನ್ನೆಲ್ಲಾ ಮರೆತು ಈಗಲೂ ಪ್ರೀತಿಸುತ್ತಿರುವೆ. I love you now Racana, Look at me. Look up. Its true, ಓಹ್! ನಿನ್ನನ್ನು ಬಿಟ್ಟು ಬದುಕಲು ಸಾಧ್ಯವಿಲ್ಲ ರಚೂ ಎಂದು ಪ್ರಲಾಪಿಸತೊಡಗಿದನು. ಅವಳೂ ಕೂಡ ಅದಕ್ಕೆ ಪ್ರತಿಯಾಗಿ 'I love you' ಎಂದು ದುಃಖ ಸಹನೆ ಹಾಗೂ ನೆನಪು ವಿಷಾದ ಎಲ್ಲವನ್ನೂ ಒಟ್ಟಿಗೆ ಹೇಳುವಂತೆ ಮೆಲ್ಲಗೆ ನುಡಿದಳು ಜೋರಾಗಿ ಹೇಳು ನನ್ನ ಮುದ್ದುಗಿಣೀ ಎಂದ ಮತ್ತೆ 'I love you' ಎಂದಳು ಇನ್ನೂ ಗಟ್ಟಿಯಾಗಿ ಹೇಳು ಎನ್ನುತ್ತಿದ್ದಂತೆಯೇ ಅವಳು 'I love you I love you dammit!' ಎಂದು ದೊಡ್ಡದಾಗಿ ಕೂಗಿಕೊಂಡಳು. ಅವಳು ಹೇಳಿದ ಆ ಮಾತುಗಳನ್ನು ಮೈಕ್ರೋ ಫೋನ್ ಟೇಪ್ ಮಾಡಿಕೊಂಡಿತ್ತು ಅದನ್ನು ತೋರಿಸಿ ನನಗೆ ಬೇಕಾದ್ದು ಈಗ ಸಿಕ್ಕಿತು. ಈಗ ಮ್ಯಾರೇಜ್ ಮ್ಯೂಸಿಯಂ ನೋಡಲು ಬರೋರೆಲ್ಲ ನಮ್ಮ ಈ ಮಾತುಗಳನ್ನೆಲ್ಲ ಟೇಪ್ ಮೂಲಕ ಕೇಳುತ್ತಾರೆ ಹಿನ್ನೆಲೆಯಾಗಿ ಇಡೀ ಮನೆ ತುಂಬ ಇದನ್ನು

ಯಾವಾಗಲೂ ಹಾಕುತ್ತಿರುತ್ತೇನೆ. ಆಗ ಜನಕ್ಕೆ ಎಂಥ ಸುಖ ಸಿಕ್ಕುತ್ತದೆ ಗೊತ್ತಾ? ಎಂದು ಮನೆಯಿಂದ ಹೊರಗೆ ಕಳಿಹಿಸುತ್ತಾನೆ. ಈ ಕಥೆಯ ಮೂಲಕ ಅವಿನಾಶ್‌ನ ಮನಸ್ಥಿತಿಯನ್ನು ಬಿಚ್ಚಿಡುವುದರ ಮೂಲಕ ವ್ಯಕ್ತಿಯೊಬ್ಬನ ಸ್ವಾರ್ಥವನ್ನು, ಅದಕ್ಕಾಗಿ ಅವನು ಇಳಿಯುವ ನೀಚ ಮಟ್ಟವನ್ನು ಚಿತ್ರಿಸುತ್ತಾ ಹೆಣ್ಣೊಬ್ಬಳ ಅಸಹಾಯಕತನವನ್ನು ತನಗೆ ಬೇಕಾದಂತೆ ಬಳಸಿ ಕೊಳ್ಳುವ ಗಂಡಸಿನ ಮನಸ್ಥಿತಿಯನ್ನು ಚಿತ್ರಿಸುತ್ತಾ ಹೋಗುತ್ತಾರೆ.

**ತ್ತುತ್ತಿನಮರ**

ಈ ಕಥೆಯಲ್ಲಿ ತಾತನ ತಿಥಿಯ ದಿನ ಅವನ ಆಸ್ತಿಯ ಹಂಚಿಕೆ ಸುತ್ತನಿಂತ ನಿರೂಪಕ ತನ್ನ ನೆನಪಿನ ಬುತ್ತಿಯಿಂದ ಒಂದೊಂದೇ ಬಾಣವನ್ನು ಹೊರತೆಗೆಯುತ್ತಾ ಹೊಗುತ್ತಾನೆ ತನ್ನ ಬಾಲ್ಯದಲ್ಲಿನ ತನ್ನ ನೆಚ್ಚಿನ ಅನೇಕ ಸ್ಥಳಗಳ ವಿರೂಪ ಕಾಲದ ಚಲನೆ ಸಾಯುವ ಸಮಯದಲ್ಲೂ ಮಾನವೀಯತೆಯನ್ನು ಮರೆದ ತಾತ, ತಿಥಿಯದಿನ ಆಸ್ತಿ ಹಂಚಿಕೆಯ ಸಂದರ್ಭದಲ್ಲಿ ಮಾತಿನ ಚಕಮಕಿಯಿಂದ ಬೇಸತ್ತು ಆನಂದ ಎನ್ನುವ ವ್ಯಕ್ತಿ ಜಗಳವನ್ನು ನಿಲ್ಲಿಸುವ ಸಲುವಾಗಿ ತನ್ನ ಇಂಗ್ಲೀಷ್ ಭಾಷೆಯನ್ನು ತಂತ್ರವನ್ನಾಗಿ ಬಳಸಿಕೊಳ್ಳುತ್ತಾನೆ. ಬೆಂಗಳೂರಿನ ಫ್ಯಾಕ್ಟರಿಯೊಂದರಲ್ಲಿ ಸೆಕ್ಯೂರಿಟಿ ಗಾರ್ಡ್ ಆಗಿ ಸೇವೆ ಮುಗಿಸಿ ಬಂದಿದ್ದ ಆತ ಯಾವತ್ತು ಜಗಳಗಳಲ್ಲಿ ಇಂಗ್ಲೀಷ್ ಪ್ರಹಾರಗಳಿಂದ ಜನರ ಮಾತನ್ನು ಅಡಗಿಸುತ್ತಿದ್ದ ಮುರುಕು ಟ್ರಂಕೊಂದರ ಮೇಲತ್ತಿ ನಿಂತು ದೊಡ್ಡ ಗಂಟಲು ತೆಗೆದು 'Stop Stop. Shut up. what mans you all. He talk She talk they talk all talk ಬರೀ talk talk talk Full talk. Cancel the fighting. It is shame to our Caste...........'You say I say. Simply sitting is danger. outers.............. see............ laugh ಹೀಗೆ ತನ್ನದೇಯಾದ ಶೈಲಿಯಲ್ಲಿ ಮಾತನಾಡುತ್ತಾ ಹೋಗುತ್ತಾನೆ. ಇಂಗ್ಲಿಷ್ ಕಲಿಯದೇ ಇದ್ದ ವ್ಯಕ್ತಿ ಸಂಭಾಷಣೆಗೂರಗಿಸಿ ಕೊಂಡಾಗ ಇಂಗ್ಲೀಷ್ ಪದವನ್ನು ಬಳಕೆ ಮಾಡುವುದು.

**ಶವಯಾತ್ರೆ**

ಈ ಕಥೆಯು ಹೆಡ್‌ಬಾಸ್‌ನ ಸಾವಿನ ಮೂಲಕ ತೆರೆದುಕೊಳ್ಳುತ್ತಾ ಹೋಗುತ್ತದೆ. ಹೆಡ್‌ಬಾಸ್‌ನ ಶವದ ಸುತ್ತ ಅನೇಕ ಸಂಗತಿಗಳು ಹಾವಿನಂತೆ ಸುತ್ತಿಕೊಂಡಿದ್ದವು. ಸತ್ತ ವ್ಯಕ್ತಿಯ ಬಗ್ಗೆ ಪರಿಚಯ ಮಾಡಿಕೊಡುವಾಗ ಆ ವ್ಯಕ್ತಿಯು ಆಂಡ್ರ್ಯೂಲಾಂಗರ ಜೊತೆ

ಸಂಬಂಧವನ್ನು ಬೆಳೆಸುವ ಸಂಧರ್ಭವನ್ನು ಹೇಳುವಾಗ ಇಂಗ್ಲಿಷ್ ಭಾಷೆಯನ್ನು ಬಳಸಿಕೊಳ್ಳುತ್ತಾರೆ. ಆಂಡ್ರ್ಯೂಲಾಂಗರು ಹೆಡ್‌ಬಾಸ್ ಜೊತೆ ಪ್ರಾರಂಭದಲ್ಲಿ ಮಾತನಾಡುವಾಗ ಈ ಕೆಳಗಿನಂತೆ ಬಳಸಿಕೊಳ್ಳುತ್ತಾರೆ. ಆಂಡ್ರ್ಯೂಲಾಂಗರು ಹೆಡ್‌ಬಾಸ್‌ನ ಹೆಸರನ್ನು ಕೇಳಿದಾಗ ಅವನು ತನ್ನ ಹೆಸರನ್ನು 'ದೊಡ್ಡದಾಸ' ಎಂದು ಹೇಳುತ್ತಾನೆ. ಅದರ ಅರ್ಥವನ್ನು ಕೇಳಿ ತಿಳಿದ ಆಂಡ್ರ್ಯೂಲಾಂಗರು ಬಿದ್ದು ಬಿದ್ದು ನಕ್ಕು " Big slave, Big slave, the Biggest and the brightest slave of India never touched by anybody" ಎಂದು ಹೇಳುತ್ತಾನೆ. ಆಂಡ್ರ್ಯೂಲಾಂಗರು ಇಂಗ್ಲೆಂಡಿನ ವ್ಯಕ್ತಿಯಾಗಿರುವುದರಿಂದ ಅವನ ಮಾತನ್ನು ಇಂಗ್ಲಿಷಿನಲ್ಲಿ ಬಳಸಿಕೊಂಡಿದ್ದಾರೆ.

ಮೊಗಳ್ಳ ಗಣೇಶ್ ಅವರು ತಮ್ಮ ಕಥೆಗಳಲ್ಲಿ ಆಡು ಭಾಷೆಯನ್ನು ಪ್ರಮಾಣ ಭಾಷೆಯನ್ನು ಬಳಸಿಕೊಂಡಿದ್ದಾರೆ. ನಗರದ ಪ್ರಭಾವ, ಆಧುನಿಕತೆಯ ಪ್ರಭಾವವಿರುವವರು ಮಾತನಾಡುವಾಗ ಪ್ರಮಾಣ ಭಾಷೆಯನ್ನು, ಹಳ್ಳಿಯ, ಗ್ರಾಮಪ್ರದೇಶದ ಹಿನ್ನೆಲೆಯವರು ಮಾತನಾಡುವಾಗ ಆಡು ಭಾಷೆಯನ್ನು ಬಳಸಿಕೊಂಡಿದ್ದಾರೆ. ಕೆಲವು ಕಡೆಗಳಲ್ಲಿ ನುಡಿಗಟ್ಟುಗಳನ್ನು ಬಳಸಿಕೊಂಡಿದ್ದಾರೆ.

**ಒಂದು ಹಳೇ ಚಡ್ಡಿ**

"ವುಡೂಗಿ ಗಂಡ ಯಿಡುದ್ರೆ ನಿಲ್ಲಾ, ಯಡ್ಗೆ ತತ್ತಾರ್ಲೆ ದಬ್ಬಾಕುವ ಅನ್ನುವಂಗೆ ಆಡ್ತಿದ್ದಿಯಲಪ್ಪಾ"

**ಬಾಡೂಟ**

"ಅಲಲಲಾ ಅನ್ನು ಅಳ್ಳಿಮರವಾ ನೆಚ್ಚಬೌದೇ ವರ್ರು, ಮೆತ್ಗಿರು ಕಳ್ಳಿಗಿಡವ ನಂಬುಕಾದದೆ"

**ಬತ್ತ**

ಕಥೆಯಲ್ಲಿ ಬರುವ ತಹಸೀಲ್ದಾರರು ಮತ್ತು ಪೋಲಿಸಿನವರು ಇವರು ವಿದ್ಯಾವಂತರು ಜೊತೆಗೆ ನಗರ ಪ್ರದೇಶದವರು ಆಗಾಗಿ ಇವರು ಮಾತನಾಡುವಾಗ ಪ್ರಮಾಣ ಭಾಷೆಯನ್ನು ಬಳಸಿಕೊಂಡಿದ್ದಾರೆ.

"ನೋಡಿ, ಯಾರು ಯಾವ ಗದ್ದಲ ಮಾಡದೆ ಬತ್ತ ಕೊಯ್ದು ಹಾಕಿ; ಒಂದೊಂದು ಕೆಲಸವನ್ನೂ ಹಂಚಿಕೊಂಡು ಮಾಡಿ, ಯಾವ ಗಲಭೆಗೂ ಹೆದರಬೇಡಿ, ಬತ್ತದ ಕೊಯ್ಲು ಇವತ್ತೆ ಮುಗಿಯಬೇಕು. ಮತ್ತೆ ಬತ್ತವನ್ನೂ ಬಡಿದು ಈ ಸಂಜೆಯೇ ಎಲ್ಲವನೂ ಮುಗಿಸಬೇಕು"

"ಇನ್ನೂ ಏನೇನ್ ಬಚ್ಚಿಟ್ಟಿದ್ದೀರಿ ಹೊರಹಾಕಿ. ಇಲ್ದೇ ಇದ್ರೆ ಊರ್ನೇ ಅರೆಸ್ಟ್ ಮಾಡ್ಬೇಕಾಗುತ್ತದೆ. ಹೂತಿರೂ ಹೆಣಾನೇ ಪತ್ತೆ ಮಾಡಿ ಹೊರಕ್ಕೆ ತೆಗೆಯೇರು ನಾವು. ಹೂಂ ನೀವೇ ತಂದ್ರಾ ಸರಿ"

ಬತ್ತ ಕಥೆಯಲ್ಲಿ ಬರುವ ಚಿಲ್ರೆ ಮಾತನಾಡುವಾಗ ಆಡು ಭಾಷೆಯನ್ನು ಬಳಸುತ್ತಾರೆ ಏಕೆಂದರೆ ಇವನು ಹಳ್ಳಿಯವನು ಇವನ ಮೇಲೆ ಯಾವುದೇ ಪ್ರಭಾವವಾಗಿರುವುದಿಲ್ಲ.

" ಯೀ ಜನಗೋಳ್ ನೋವ್ಗೆ ನೀವ್ಯಾಕೆ ಬೇಜಾರ್ ಮಾಡ್ಕಂದಿರಿ ಬುಡಿಸ್ವಾಮಿ, ನಮ್ ನೋವ ನಾವೆ ಹಣ್ ಮಾಡ್ಕತಿಂತೀವಿ"

**ಒಂದು ಹಳೇ ಚಡ್ಡಿ**

ಈ ಕಥೆ ಹಳ್ಳಿಯ ಬಡತನದ ಬಗ್ಗೆ ಚಿತ್ರಣವನ್ನು ಕೊಡುವುದರಿಂದ ಇಲ್ಲಿ ಬರುವ ವ್ಯಕ್ತಿಗಳೆಲ್ಲಾ ಹಳ್ಳಿಯವರು ಆದ್ದರಿಂದ ಇವರ ಮಾತುಗಳನ್ನು ಆಡು ಭಾಷೆಯಲ್ಲಿ ಆಡಿಸುತ್ತಾರೆ.

"ಯಾರೋ ನಾಗರಾಜ...... ನಾಗರಾಜ... ಎಂದು ಕೂಗಿಕೊಂಡು ಬಂದು, 'ಏನಪ್ಪಾ, ಎಲ್ಲೋದಾ ಅಂತಿಂದ್ರೆ ನೀನಿಲ್ಲೆ ಆಂಜುಣೆಯಯುನ್ ತರ ನಿಂತಿದ್ದಿಯಲಾ, ಹೋಗಿ ಸೈಕಲೆಲಿ ಎರಡು ದಮ್ಮು ನೀರು ತಂದು ಬಡುಬಾ' ಎಂದರು."

"ನೋಡ್ದಾ, ಈಗೋಗನೇನೋ, ಹಗ್ಗ ಹಿಡ್ಕಂಡು ಕೈ ಬೀಸ್ಕಂಡು ಹೆಂಗ್ಸಂಗೆ. ಮನೆಲಿ ಇಷ್ಟೊಂದೆಂಗ್ಸಿದ್ದಾರಲಾ, ಯಾರಾರ ಹೋಗಿ, ತರ್ಲಿ. ನನ್ ಮದುವೆಲಿ ಏನ್ ನೀವೆಲ್ಲ ಒಡಾಡ್ಕಂಡು ಕೆಲ್ಸ ಮಾಡದ್ರೋನೊ; ವೋಗುರ್ಲಾ ನೀವೇ ಯಲ್ಲನು ಮಾಡ್ಕಳಿ"

"ಆಯ್ಯೋ ಅಷ್ಟೊತ್ತಿಂದ್ಲು ನೆಡಿಸ್ತಾವ್‌ರೆಕನಪಾ ವಾಕಾ ಜಾವಾ, ಆವೊಯ್ದ ಚಡ್ಡಿ ಇಕ್ಕಲಿಲ್ಲ, "ಇಕ್ಕಮ್ಮಿ ಇಕ್ಕಮ್ಮಿ" ಅಂತ ಅವುನು, 'ಆಯ್ಯೋ ಅದೆಲ್ಲಿದ್ದದೊ ಕಾಣೆ ಕನೋಗು, ಎಲ್ಲೊ ಹೇತ್ ಬುಟ್ಟು, ಹಿತ್ಲೆಲೆ ಬಿಸಾಕಿರಬೇಕು ಅಂತಾ ಇವುಳು' ಹಿಂಗೇ ಈ ಮಾತ್ಗೆ ಕನಪಾ".

ರೈಲು ಜನ.

" 'ಅದಿರ್ಲಿ, ಐಯ್ ಥಿಂಕ್ ಯೂ ಬಿಲಾಂಗ್ಸ್ ಟು ದೊಂಬಾ'

'ಹಾ ಹಾ, ಅರ್ಥ ಆಗಿಲ್ಲಾ.'

'ಅಂದ್ರೆ ನೀವು ದೊಂಬ್ರಾ'

'ಇಲ್ಲಾ ಸಾರ್ ನನ್ನೇರಿಯಾ ದೊಂಬರಕೇರಿ ಅಷ್ಟೆ'

'ನಿಮ್ಮ ಜಾತಿ'

'ಸಾರ್ ನಂದು ದಮಕಿ ಕ್ಯಾಸ್ಟು'

'ಅರೇ, ಸರ್‌ಪ್ರೈಸ್. ವಾಟ್ ಕೈಂಡ್ ಆಫ್ ದಿಸ್ ಕ್ಯಾಸ್ಟ್, ಇಂತಾ ಒಂದು ಜಾತಿ ಹೆಸರನ್ನೇ ನಾನು ಕಾಳಿಲ್ಲಾರೀ. ಇದೆಲ್ಲಿತ್ರೀ ಇಲ್ಲೀತನಕ. ಎಷ್ಟಿದೆ ನಿಮ್ ಪಾಪುಲೇಷನ್'

'ಏನ್ ಹೆಚ್ಚು ಕಡಿಮೆ ನಾನೂರಿಪ್ಪತ್ತಿದೆ ಅಂತಾ ನಮ್ ಜಾತಿಯೋರೊಬ್ರು ಹೇಳವ್ರೆ ಸಾರ್.'

'ಓಹ್. ಫೂರ್‌ಟ್ವೆಂಟೀ, ಬರೀ ನಾನೂರಿಪ್ಪತ್ತೆನಾ. ಯುವರ್ ಕಮ್ಯುನಿಟೀ ಈಸ್ ಜಸ್ಟ್ ಫೂರ್‌ಟ್ವೆಂಟಿ.'

'ಹೌದು ಸಾರ್ ಬಾಳ ಹಿಂದುಳಿದ ಜಾತಿಸಾರ್ ನಮುದು. ಇಡೀ ಕರ್ನಾಟಕದಲ್ಲೆಲ್ಲ ಹುಡುಕಂಡ್ರೂ ಅಷ್ಟೆಯಾ. ನಮ್ಗೆ ಯಾರು ಲೀಡ್ರು ಇಲ್ಲಾ ಏನೂ ಇಲ್ಲಾ ಸಾರ್.'"

ಹೀಗೆ ಮೊಗಳ್ಳಿ ಗಣೇಶ್ ಅವರು ತಮ್ಮ ಕಥೆಗಳಲ್ಲಿ ಸಮಯ ಸಂದರ್ಭ ಮಾತಾಡುತ್ತಿರುವ ವ್ಯಕ್ತಿ, ಅವನ ಸ್ಥಾನಮಾನ, ಜ್ಯಾತಿ, ವಿದ್ಯಾಭ್ಯಾಸ, ಅವರ ಮೇಲಾಗಿರುವ ಪ್ರಭಾವ ಇವೆಲ್ಲವುಗಳ ಹಿನ್ನೆಲೆಯಲ್ಲಿ ಅವರ ಭಾಷೆಯನ್ನು ಬಳಸುತ್ತಾರೆ.

### ೩.೩ತಂತ್ರ

ಮೊಗಳ್ಳಿ ಗಣೇಶ್ ರವರು ತಮ್ಮ ಕಥೆಗಳಲ್ಲಿ ತಮ್ಮದೇ ಆದಂತಹ ತಂತ್ರಗಳನ್ನು ಬಳಸಿಕೊಂಡು ಚಿತ್ರಿಸುತ್ತಾ ಹೋಗುತ್ತಾರೆ. ೧)ಮಗುವಿನ ದೃಷ್ಟಿಕೋನದ ಮೂಲಕ ನೋಡುತ್ತಾ ಕಥೆಯನ್ನು ಹೇಳುವುದು. ೨) ಬಾಲ್ಯದ ನೆನಪುಗಳ ಮೂಲಕ ಕಥೆ ಹೇಳುವುದು. ೩) ಹುಡುಗನ ದೃಷ್ಟಿ ಕೋನದ ಮೂಲಕ ಕಥೆ ಹೇಳುವುದು. ೪) ಸ್ತ್ರೀ ಪಾತ್ರವನ್ನು ಪ್ರಧಾನವಾಗಿಟ್ಟು ಕೊಂಡು ಕಥೆ ಹೇಳುವುದು. ೫) ನಿರೂಪಕ ಒಂದು ಸುಪ್ತ ಪಾತ್ರವಾಗಿ ತನ್ನ ತೋರು ಬೆರಳಿನಿಂದ ಕಥೆಯನ್ನು ಹೇಳುತ್ತಾ ಹೋಗುವುದು. ೬) ಒಂದು

ಸೃಜಶೀಲತೆಯ ಕಥೆಯ ಒಳಗಡೆ ಇನ್ನೊಂದು ಸೃಜನಶೀಲತೆಯ ಕಥೆಯನ್ನು ಕಟ್ಟಿಕೊಡುವುದು. ೭) ನಿರೂಪಕರೇ ಪಾತ್ರಧಾರಿಯಾಗಿ ಕಥೆ ಹೇಳುತ್ತಾ ಹೋಗುವುದು. ೮) ಪರಂಪರೆಯ ಪ್ರತಿನಿಧಿಗಳಾದ ಅಜ್ಜಿ ಅಜ್ಜ ಅಥವಾ ಸ್ತ್ರೀಯೊಬ್ಬಳ ಮೂಲಕ ಕಥೆಯನ್ನು ಪ್ರಾರಂಭ ಮಾಡುವುದು.

**೧) ಮಗುವಿನ ದೃಷ್ಟಿಕೋನದ ಮೂಲಕ ನೋಡುತ್ತಾ ಕಥೆಯನ್ನು ಹೇಳುವುದು.**

**ಅಲ್ಲಿ ಆ ಆಳು ಈಗಲೂ**

ಈ ಕಥೆಯು ಹೂವನ ಅಳುವಿನ ಸುತ್ತಾ ತೆರೆದು ಕೊಳ್ಳುತ್ತಾ ಹೋಗುತ್ತದೆ ಈ ಕಥೆಯನ್ನು ಮಗುವಿನ ದೃಷ್ಟಿಕೋನದ ಮೂಲಕ ಹೇಳುತ್ತಾ ಹೋಗುತ್ತಾರೆ ಹೂವ ತನ್ನ ಮುಗ್ಧ ಕಣ್ಣಿನ ಮೂಲಕ ಜನರ ಮೂಢನಂಬಿಕೆ, ಅವರು ಆಚರಿಸುವ ಆಚರಣೆಗಳು ದೊಡ್ಡವರ ಚಟುವಟಿಕೆಗಳನ್ನು ನೋಡುತ್ತಾ ಹೋಗುತ್ತಾನೆ. ಕಾರಣವೆ ಇಲ್ಲದೆ ಅಳುವ ಹೂವನ ಬಗ್ಗೆ ಮನೆಯವರೆಲ್ಲ ಸಿಟ್ಟುಗೊಳ್ಳುವುದರ ಮೂಲಕ ಆರಂಭವಾಗಿ ಅನಂತರ ಆ ಮನೆಯವರ ನಂಬಿಯಕೆ ಮೂಲಕ ಬಿಚ್ಚಿಕೊಳ್ಳುತ್ತಾ ಹೋಗಿ ಕೊನೆಗೆ ಹೂವ ಸಾಯುವುದರ ಮೂಲಕ ಕಥೆ ಅಂತ್ಯವಾಗುತ್ತದೆ. ಅಲಿಯವರೆಗೂ ಹೂವನ ದೃಷ್ಟಿ ಕೋನದ ಮೂಲಕವೇ ಕಥೆಯನ್ನು ಹೇಳುತ್ತಾರೆ.

**ಕಾಳಗದ ಹುಂಜ**

ಈ ಕಥೆಯಲ್ಲಿ ಮನುಷ್ಯನ ಕ್ರೌರ್ಯವನ್ನು ಮನುಷ್ಯತ್ವವನ್ನು ಮೀರಿ ರಾಕ್ಷಸನ ಹಾಗೆ ನಡೆದುಕೊಳ್ಳುವ ಮನುಷ್ಯನ ವ್ಯಕ್ತಿತ್ವವನ್ನು ತಂದೆತಾಯಿ ತಮ್ಮದೇ ಅಲೋಚನೆಯಲ್ಲಿ ಮಳುಗಿದ್ದಾಗ ಅತಂತ್ರ ಸ್ಥಿತಿಗೆ ತಲುಪುವ ಮುಗುವಿನ ಬದುಕು ಗಂಡನ ಪ್ರಪಂಚಕ್ಕೆ ಹೊಂದಿಕ್ಕೊಳಲಾಗದ ಹೆಂಡತಿ ಕೊಡುಕೊಂಡಿರುವ ತನ್ನದೇಯಾದ ಪ್ರಪಂಚ ಹೀಗೆ ಇವೆಲ್ಲವನ್ನು ಮಗುವಿನ ದೃಷ್ಟಿ ಕೋನದ ಮೂಲಕ ಚಿತ್ರಿಸುತ್ತಾ ಹೋಗುತ್ತಾರೆ.

ಪ್ರತಿಯೊಂದನ್ನು ಕುತೂಹಲದಿಂದ ನೋಡುವ ರಾಜ ತನ್ನ ತಂದೆ ತಾನು ಪ್ರೀತಿಯಿಂದ ಸಾಕಿದ ಕಾಳಗದ ಹುಂಜಕ್ಕೆ ರೊಚ್ಚು ರೋಷ ಕೆಚ್ಚು ಎಲ್ಲವೂ ಕಾಳಗದ ದಿನ ಮೈದುಂಬಿ ಬಂದು ಯಾರ ವಿರುದ್ದವಾದರೂ ಹೋರಾಡಿ ಕಡಿದು ಹಾಕುವ ಶಕ್ತಿ ಬರಲೆಂದು ಕೊಂಡಣ್ಣ ತನ್ನ ಹುಂಜಕ್ಕೆ ಹಾವನ್ನು ತಿನ್ನಿಸುವುದನ್ನು ಅದೇ ಕುತೂಹಲ ಕಣ್ಣುಗಳಲ್ಲಿ ನೋಡುತ್ತಿರುವಾಗ ಅವನ ಆಲೋಚನೆ ಅವನ ತಾಯಿಯ ಹತ್ತಿರ ಹೋಗುತ್ತದೆ

ಅವ್ವ ಎಂದಿ ನಂತೆಯೆ ಪೂಜೆಯಲ್ಲಿ ತಲ್ಲಿನಳಾಗಿದ್ದು ಕಂಡು ಅವಳನ್ನು ನೋಡಲಾರದೆ ಮೌನದಲ್ಲಿ ಮುಳುಗುತ್ತಾನೆ. ತಂದೆಯ ಜೊತೆಸೇರಲೂ ಆಗದೆ ತಾಯಿಯ ಜೊತೆಯಲ್ಲೂ ಆಡಲೂಗದ ಸಂಧಿಗ್ಧ ಪರಿಸ್ಥಿತಿ ರಾಜನದು. ಅವನ ಪರಿಸ್ಥಿತಿಯ ಮೂಲಕವೇ ಕಥೆಯನ್ನು ಮುನ್ನಡೆಸಿಕೊಂಡು ಹೋಗುತ್ತಾರೆ.

ಈ ಕಥೆಯಲ್ಲಿ ಮನುಷ್ಯನ ಕ್ರೌರ್ಯವನ್ನು ಮುಗ್ಧ ಮನಸ್ಸಿನ ಮೂಲಕ ತೋರಿಸುವ ಪ್ರಯತ್ನವನ್ನು ಮಾಡಿದ್ದಾರೆ. ಮುಗ್ಧ ಮನಸ್ಸು ಅನುಭವಿಸುವ ನೋವು ಯಾತನೆಯನ್ನು ಬಿಚ್ಚಿಹೇಳುತ್ತಾ ಹೋಗುತ್ತಾರೆ.

**ಕಿಚ್ಚು**

ಈ ಕಥೆಯನ್ನು ನಿರೂಪಕರು ಪುಟ್ಟಿಯ ದೃಷ್ಟಿ ಕೋನದ ಮೂಲಕ ಚಿತ್ರಿಸುತ್ತಾ ಹೋಗುತ್ತಾರೆ. ಮುಗ್ಧ ಮನಸ್ಸಿನ ಮಗು ಒಂದು ಪ್ರಪಂಚವನ್ನು ತನ್ನ ದೃಷ್ಟಿಯಲ್ಲಿ ನೋಡುತ್ತಿರುವಾಗ ಆ ಮಗುವಿಗೆ ಆದಂತಹ ನೋವು, ಸಂಕಟ, ಹತಾಶೆಗಳನ್ನು ಬಿಚ್ಚಿಡುತ್ತಾ ಹೋಗುತ್ತಾರೆ.

ಪುಟ್ಟಿಯ ತಾಯಿಯಾದ ಸಾಕಿಯ ಬದುಕು, ಅವಳ ಮನಸ್ಸು, ಸಮಾಜ ಅವಳನ್ನು ನೋಡುವ ದೃಷ್ಟಿ, ಸಮಾಜದ ಬಗ್ಗೆ ಸಾಕಿಗೆ ಇರುವಂತಹ ತಾತ್ಸಾರ, ಚಿಕ್ಕಪ್ಪನ ಕ್ರೂರತನ, ತಾಯಿಯ ಕಿಚ್ಚು, ಕ್ರೂರತನದ ಚಿಕ್ಕಪ್ಪನನ್ನು ಯಾರದರು ಸಾಯಿಸಲಿ ಎಂದು ಪುಟ್ಟ ಮನಸ್ಸು ಬಯಸುವುದು, ಅಪ್ಪನ ನೆನಪು, ಅಜ್ಜಿಯ ಪ್ರೀತಿ, ಕೇರಿಯ ಜಗಳವನ್ನು ಕಂಡು ಹೆದರುವುದು ಇವೆಲ್ಲವನ್ನು ಪುಟ್ಟಿಯದೃಷ್ಟಿ ಕೋನದ ಮೂಲಕ ತೋರಿಸುತ್ತ ಹೋಗುತ್ತಾರೆ.

ಮುಗ್ಧ ಪ್ರಪಂಚದ ಆಚೆಗೆ ಇರುವ ಕ್ರೂರ ಪ್ರಪಂಚವನ್ನು, ಅವುಗಳಲ್ಲಿರುವ ಸಂಬಂಧವನ್ನು ಪುಟ್ಟಿಯ ದೃಷ್ಟಿಕೋನದಿಂದ ನೋಡುತ್ತಾರೆ. ಮುಗ್ಧ ಮನಸ್ಸಿಗೆ ಈ ಕ್ರೂರ ಪ್ರಪಂಚಗಳು ಉಂಟು ಮಾಡುವ ದುಃಖ, ಹತಾಸೆಗಳು ಪುಟ್ಟಿ ಮನಸ್ಸಿನ ಮೇಲೆ ಬೀರುವಂತಹ ಪರಿಣಾಮಗಳಿಂದ ಗಮನಿಸಬಹುದು. ತಾಯಿಯ ಅನೈತಿಕ ಸಂಬಂಧದಿಂದ ಪುಟ್ಟಿಯ ಮನಸ್ಸಿನ ಮೇಲೆ ಆದಂತಹ ಆಘಾತ, ಸಣ್ಣ ಆಸೆಗಳನ್ನು ಹೀಡೇರಿಸಿಕೊಳ್ಳಲಾಗದ ಪುಟ್ಟಿಯ ಅಸಹಾಯಕ ಮನಸ್ಥಿತಿ ಇವೆಗಳೆಲ್ಲವನ್ನು ನಿರೂಪಿಸುತ್ತಾ ಹೋಗುತ್ತಾರೆ.

೨) ಬಾಲ್ಯದ ನೆನಪುಗಳ ಮೂಲಕ ಕಥೆ ಹೇಳುವುದು.

ತಮ್ಮ ಬಾಲ್ಯದಲ್ಲಿ ನಡೆದಂತಹ ಘಟನೆಗಳನ್ನು ನೆನಪು ಮಾಡಿಕೊಳ್ಳುವುದರ ಮೂಲಕ, ಬಾಲ್ಯದ ಜೀವನವನ್ನು ಹೇಳುವುದರ ಮೂಲಕ ತಮ್ಮ ಬದುಕನ್ನು ತಮ್ಮವರ ಬದುಕನ್ನು, ನಂಬಿಕೆಯನ್ನು, ಅರ್ಥ ಕಳೆದು ಕೊಳ್ಳುತ್ತಿರುವ ಸಂಬಂಧಗಳನ್ನು, ರಾಜಕೀಯವನ್ನು, ನಾಗರೀಕತೆ ಉಂಟು ಮಾಡಿರುವ ಪರಿಣಾಮವನ್ನು ಚಿತ್ರಿಸುತ್ತಾ ಹೋಗುತ್ತಾರೆ.

**ಕಾಳಿ**

ಈ ಕಥೆಯನ್ನು ಇದಕ್ಕೆ ಉದಾಹರಣೆಯಾಗಿ ನೋಡ ಬಹುದು ತನಗೆ ಬಂದ ಟೆಲಿಗ್ರಾಂನ ಮೂಲಕ ತನ್ನ ಬಾಲ್ಯದ ನೆನಪುಗಳನ್ನು ಮಾಡಿಕೊಳ್ಳುವುದರ ಮೂಲಕ ಕಥೆ ಹೇಳುತ್ತಾ ಹೋಗುತ್ತಾರೆ ತನ್ನನ್ನು ಸಾಕಿದ ಕಾಳಿಯ ಕೊನೆಯ ಕ್ಷಣಗಳಿಗೆ ಊರಿಗೆ ಬರುವಂತೆ ಬಂದ ಟೆಲಿಗ್ರಾಂ ಅದು ಆ ಮೂಲಕ ಕಾಳಿ ಮತ್ತು ತನ್ನ ಸಂಬಂಧ ಹೇಗಿತ್ತು ತನ್ನ ಬಾಲ್ಯದ ಅನುಭವಗಳು ಇವುಗಳನ್ನು ಚಿತ್ರಿಸುತ್ತಾ ಹೋಗುತ್ತಾರೆ.

ತನ್ನ ತಾತ ಮುತ್ತಾತರು ಕಟ್ಟಿಸಿದ ಮನೆಯ ಭಾಗಾಯ್ತಿಯಲ್ಲಿ ತನ್ನ ಏಕಮಾತ್ರ ಪುತ್ರನಿಗೆ ಸರಿಯಾಗಿ ಭಾಗ ಬರಲಿಲ್ಲವೆಂಬ ಮಾತಿಗೂ ಮನೆಯ ಮುಂಭಾಗವೇ ಬೇಕು ಎಂಬ ಹಠದಿಂದ ಕಾಳಿಯ ಜೊತೆ ಜಗಳ ಮಾಡಿ ಅವಳ ಸುಕ್ಕುಗಟ್ಟಿದ ಕಪೋಲಗಳ ನಡುವೆ ತನ್ನ ಕೈ ಬೆರಳುಗಳು ಕ್ರೂರ ಕೃತಘ್ನತೆ ಸಲ್ಲಿಸದ್ದನ್ನು ನೆನಪು ಮಾಡಿಕೊಳ್ಳುತ್ತಾ ಕಾಳಿ ಮತ್ತು ತನ್ನ ಬಾಲ್ಯವನ್ನು ಬಿಚ್ಚಿಡುತ್ತಾ ಹೋಗುತ್ತಾರೆ. ಭಿಕ್ಷೆ ಬೇಡಿ ಅವಳು ತನ್ನನ್ನು ಸಾಕಿದ್ದನ್ನು ನೆನಪುಮಾಡಿಕೊಳ್ಳುತ್ತಾ ಅವಳ ಬದುಕು ಸಾರ್ಥಕವಾದುದ್ದರ ಬಗ್ಗೆ ಹೇಳುತ್ತಾರೆ.

**ತಣಿಗೆ**

ಈ ಕಥೆಯಲ್ಲಿ ತಾತನ ಕನಸು ತಣಿಗೆ ಸಾಂಸ್ಕೃತಿಕ ಆಯಾಮವನ್ನು ಪಡೆದುಕೊಂಡು ದೈವಿಕವಸ್ತುವಿನ ಸ್ಥಾನವನ್ನು ಪಡೆದಿದ್ದು, ವಿಕಾರ ಹಾಗು ವಿಕೃತ ಮನಸ್ಸುಗಳು ತಮ್ಮದೇ ಆದ ಲೋಕದಲ್ಲಿ ಮುಳುಗಿದ್ದ ಗಂಡಸರು, ಇಳಿ ವಯಸ್ಸಿನಲ್ಲಿ ದುಡಿದು ಮನೆ ನಡೆಸುತ್ತಿದ್ದ ತಾತ, ನಿರಾಶೆ, ವಿಷಾದ, ತಣಿಗೆ ತನ್ನ ಅಸ್ತಿತ್ವವನ್ನು ಕಳೆದುಕೊಂಡದ್ದು, ನಾಗರೀಕತೆಯ ಪ್ರವೇಶ, ಜೀವನ ಮೌಲ್ಯದಲ್ಲಿ ಆದಂತಹ ಬದಲಾವಣೆ, ಮಾನವೀಯ ಸಂಬಂಧಗಳ ಕಟ್ಟು, ಅಸ್ತವ್ಯಸ್ತವಾಗಿ ಬಿಟ್ಟಿರುವುದು ರಾಜಕೀಯ,

ಸಂಬಂಧಗಳು ಅರ್ಥ ಕಳೆದುಕೊಳ್ಳುತ್ತಿರುವುದು, ಪೇಟೆಯ ಸಂಕೀರ್ಣ ಜೀವನ, ನಂಬಿಕೆಯಲ್ಲಾದ ಬದಲಾವಣೆಯನ್ನು ಚಿತ್ರಿಸುತ್ತಾರೆ.

ಹೀಗೆ ಈ ಕತೆಯಲ್ಲಿ ತನ್ನ ಬಾಲ್ಯದ ನೆನಪುಗಳ ಮೂಲಕ ಬದುಕಿನಲ್ಲಾದ ಬದಲಾವಣೆಗಳನ್ನು ಹೇಳುತ್ತಾ ಹೋಗುತ್ತಾರೆ.

**೩) ಹುಡುಗನ ದೃಷ್ಟಿ ಕೋನದ ಮೂಲಕ ಕಥೆ ಹೇಳುವುದು.**

**ಅತ್ತೆ**

ಈ ಕತೆಯು ಹುಡುಗನ ದೃಷ್ಟಿಕೋನದ ಮೂಲಕ ತೆರೆದುಕೊಳ್ಳುತ್ತಾ ಹೋಗುತ್ತದೆ ಹಾಗೆಯೇ ಮಗುವಿನ ಮುಗ್ಧತೆಯನ್ನು, ಮನುಷ್ಯನ ಕ್ರೂರತ್ವವನ್ನು, ಗಂಡನ ಬಿಟ್ಟು ಬಂದಂತಹ ಹೆಣ್ಣನ್ನು ಸಮಾಜ ನೋಡುವ ದೃಷ್ಟಿಕೋನ, ತನ್ನ ಪ್ರೀತಿಪಾತ್ರ ವ್ಯಕ್ತಿಗೆ ಸಹಾಯ ಮಾಡಲಾಗದ ಅಸಹಾಯಕತೆ, ಬದುಕಿನಲ್ಲಿ ಬಂದಂತಹ ಕಷ್ಟಗಳನ್ನು ಎದುರಿಸುವ ದಿಟ್ಟತನ ಇದೆಲ್ಲವನ್ನು ಈ ಕತೆಯಲ್ಲಿ ಬಣ್ಣಿಸುತ್ತಾ ಹೋಗುತ್ತಾರೆ.

**ಪಟೇಲ**

ಜನಪದ ಆಟವನ್ನು ತನ್ನ ಕಥೆಯಲ್ಲಿ ವಸ್ತುವನ್ನಾಗಿ ಮಾಡಿಕೊಂಡು ಆ ಮೂಲಕ ದಲಿತರ ಬದುಕು, ದಲಿತ ಮಕ್ಕಳ ಆಸೆ, ಅವರ ಕನಸು, ಕನಸನ್ನು ಹೀಡೇರಿಸಿ ಕೊಳ್ಳುವಲ್ಲಿ ಅವರ ಪ್ರಯತ್ನ, ಅದನ್ನು ತಡೆಯಲು ಮೇಲ್ವರ್ಗದವರು ಪ್ರಯತ್ನಿಸುವುದು, ಗ್ರಾಮೀಣ ಪ್ರದೇಶ ಮತ್ತು ನಗರ ಪ್ರದೇಶದ ಹುಡುಗರ ಮುಖಾಮುಖಿ, ನಗರದವರನ್ನು ಕಂಡಾಗ ಹಳ್ಳಿಯ ಹುಡುಗರಲ್ಲಿ ಆಗುವ ಅಳುಕು, ಸಾಮರ್ಥ್ಯವಿದ್ದವರಿಗೆ ಮಾತ್ರ ಗೆಲುವು ಎಂಬುದನ್ನು ಈ ಕಥೆಯ ಮೂಲಕ ಚಿತ್ರಿಸುತ್ತ ಹೋಗುತ್ತಾರೆ.

ಹುಡುಗನೊಬ್ಬನು ತನ್ನ ಬಾಲ್ಯದಲ್ಲಿನ ಆಟದ ಸಂದರ್ಭದಲ್ಲಿ ಅನುಭವಿಸಿದಂತಹ ನೋವು, ಆಟದಲ್ಲಿ ಗೆಲ್ಲಬೇಕೆಂದು ಹಠ ಮಾಡಿದ್ದು ಆಟದಲ್ಲಿ ಗೆದ್ದಾಗ ಆದಂತಹ ಸಂತೋಷ ಅದಕ್ಕೆ ಪ್ರೋತ್ಸಾಹ ನೀಡಿದ ಹೆಡ್ ಮಾಸ್ತರ್, ತಮ್ಮನ್ನು ತುಳಿಯ ಬೇಕೆಂದು ಪ್ರಯತ್ನ ಮಾಡುತ್ತಿದ್ದ ಊರಿನ ಗೌಡ, ಅವನಿಂದ ಅವಮಾನಿತನಾಗಿದ್ದು, ಆಟದಲ್ಲಿ ಗೆಲ್ಲುವುದರ ಮೂಲಕ ಗೌಡ ವಿರುದ್ಧ ಸಿಡಿದು ನಿಂತದ್ದು ಎಲ್ಲವನ್ನು ಚಿತ್ರಿಸುತ್ತಾ ಹೋಗುತ್ತಾರೆ.

**೪) ಸ್ತ್ರೀ ಪಾತ್ರಗಳ ಮೂಲಕ ಕಥೆ ಹೇಳುವುದು.**

ಸ್ತ್ರೀ ಪಾತ್ರಗಳನ್ನು ಪ್ರಧಾನವಾಗಿಟ್ಟು ಕೊಂಡು ಸಮಾಜದ ಚಿತ್ರಣವನ್ನು ಕೊಡುತ್ತಾ ಹೋಗುತ್ತಾರೆ. ಸಮಾಜದಲ್ಲಿ ಸ್ತ್ರೀಯ ಸ್ಥಾನ ಮಾನ, ಅವಳ ಜೀವನ, ಅವಳು ಬದುಕಿನಲ್ಲಿ ಎದುರಿಸುತ್ತಿರು ಎಡರು ತೊಡರುಗಳು, ಅವಳ ಅಸಹಾಯಕತೆ, ಸ್ತ್ರೀಯ ಮೇಲೆ ಪುರುಷನ ದೌರ್ಜನ್ಯ, ತನಗೆ ಎದುರಾಗುವ ತೊಂದರೆಗಳನ್ನು ಅವಳು ಬಗೆಹರಿಸಿಕೊಳ್ಳುವ ರೀತಿ, ತನ್ನ ಬದುಕನ್ನು ಕಟ್ಟಿ ಕೊಳ್ಳುವ ಅವಳ ಪ್ರಯತ್ನ, ತನ್ನವರಿಗಾಗಿ ತನ್ನ ಬದುಕನ್ನೆ ತ್ಯಾಗ ಮಾಡಿ ಬದುಕುವ ಪರಿ ಇದೆಲ್ಲವನ್ನು ತಮ್ಮ ಕಥೆಯ ಮೂಲಕ ಹೇಳುತ್ತಾ ಹೋಗುತ್ತಾರೆ.

**ಆ ಹೆಂಗಸು**

ಈ ಕಥೆಯನ್ನು ಉದಾಹರಣೆಯಾಗಿ ನೋಡಬಹುದು. ಊರಿನಲ್ಲಿ ಒಬ್ಬ ಹೆಂಗಸಿದ್ದು ಆ ಹೆಂಗಸನ್ನು ಪಡಿಯಬೇಕೆಂಬ ಗಂಡಸರ ಬಯಕೆಯನ್ನು ಅವರಿಂದ ತಪ್ಪಿಸಿ ಕೊಂಡು ಬದುಕುವ ಆ ಹೆಂಗಸನಿ ಸುತ್ತಾ ಕಥೆ ತೆರೆದು ಕೊಳ್ಳುತ್ತದೆ. ಆ ಹೆಂಗಸಿನ ಹೆಸರು ಕೆಂಪಿ ಎಂದು, ಅವಳ ಗಂಡ ಮರಣವನ್ನು ಹೊಂದಿದ್ದು ಒಂಡಿಯಾಗಿ ಜೀವನ ನಡೆಸುತ್ತಿರುತ್ತಾಳೆ.

ಅವಳನ್ನು ಪಡೆಯುವ ಸಲುವಾಗಿ ಪೂಜಾರಿ ಊರಿನ ಗೌಡನನ್ನು ಮರುಳುಡಿದ್ದು, ಮತ್ತು ತಾನೆ ಪ್ರಯತ್ನಮಾಡಿ ಸೋತ್ತದ್ದು ಮತ್ತು ಕೆಂಪಿ ಉಪಾಯ ಮಾಡಿ ತನ್ನ ರಕ್ಷಿಸಿಕೊಂಡಿದ್ದು ಇದೆಲ್ಲವನ್ನು ತಮ್ಮ ಕಥೆಯಲ್ಲಿ ಹೇಳುತ್ತಾರೆ.

**೫) ನಿರೂಪಕ ಒಂದು ಸುಪ್ತ ಪಾತ್ರವಾಗಿ ತನ್ನ ತೋರು ಬೆರಳಿನಿಂದ ಕಥೆಯನ್ನು ಹೇಳುತ್ತಾ ಹೋಗುವುದು.**

ಬಾಡೂಟ, ಬತ್ತ, ಭೂಮಿ, ಪ್ರಾಣಿಗಳು, ಕೊಂಡ ಈ ಕಥೆಗಳನ್ನು ಉದಾಹರಣೆಯಾಗಿ ತೆಗೆದು ಕೊಳ್ಳಬಹುದು.

**ಬಾಡೂಟ**

ಈ ಕಥೆಯಲ್ಲಿ ಮುಂದಿನಪೀಳಿಗೆಯು ಒಳ್ಳೆಯ ಸುಖವಾದ ಬದುಕನ್ನು ನಡೆಸಬೇಕೆಂಬ ಕನಸು, ವಿದ್ಯಾಭ್ಯಾಸ ಕೊಡಿಸಬೇಕೆಂಬ ಆಸೆ, ಅದಕ್ಕಾಗಿ ಕಷ್ಟಪಡುವುದು, ಇಳಿಯ ವಯಸ್ಸಿನಲ್ಲೂ ಮನೆಯ ಜವ್ದಾರಿಯನ್ನು ಹೊರುವುದು, ಬೇಜವ್ದಾರಿಯ ಮಗ, ಅತಿಯಾದ ವಾತ್ಸಲ್ಯ, ಬಲ ತಾಯಿ ಮತ್ತು ಮಲ ಮಗಳು ಹೊಂದಿಕೊಂಡು ಬಾಳಲಾಗದ ಅಸಹಾಕತೆ, ಪುರುಷನ ದೌರ್ಜನ್ಯ, ದುಃಖ, ಕೋಪ, ಹೊಟ್ಟೆಕಿಚ್ಚು, ಕೋಪ ಸಿಟ್ಟು

ಹೊಟ್ಟೆಕಿಚ್ಚು ಹೆಣ್ಣೊಬ್ಬಳು ಸಾವಿಗೆ ಕಾರಣವಾದುದ್ದು, ದುಡುಕುತನ ಇವೆಲ್ಲವನ್ನು ನಿರೂಪಕ ಸುಪ್ತಪಾತ್ರದ ಮೂಲಕ ನಿರೂಪಿಸುತ್ತಾ ಹೋಗುತ್ತಾರೆ.

ಬತ್ತ ಈ ಕಥೆಯ ಮೂಲಕ ಕೆಳವರ್ಗದವರ ಕನಸು, ಅವರ ಒಗ್ಗಟ್ಟು, ಹಳೆಯ ನೆನಪುಗಳು, ಸ್ವಾರ್ಥ, ಹೊಟ್ಟೆಕಿಚ್ಚು, ಹಳೆಯ ಪರಂಪರೆ ಮತ್ತು ಹೊಸಪರಂಪರೆಯ ಮುಖಾಮುಖಿ, ಹೊಸ ಪರಂಪರೆ ಹಳೆಯ ಪರಂಪರೆಗೆ ಕನಸುಗಳಿಗೆ ಬೆನ್ನು ಮಾಡಿರುವುದು, ನಾಗರೀಕತೆ, ರಾಜಕೀಯ, ಪೋಲಿಸರ ಅಸಹಾಯಕತೆ, ಹೆಂಗಸರ ದಿಟ್ಟತನ, ಸಂಚುಗಳು, ಕನಸನ್ನು ಹೀಡೆರಿಸಿಕೊಳ್ಳಲು ಮಾಡುವ ಉಪಾಯಗಳು, ಮೇಲ್ವರ್ಗದವರ ದೌರ್ಜನ್ಯ, ಕಾನೂನು ಬಡವರ ವಿರೋದವಾಗಿಯೂ ಶ್ರೀಮಂತರ ಪರವಾಗಿಯು ಇರುವುದು, ಕೆಳವರ್ಗದವರ ಕನಸು ಪಡೆದುಕೊಂಡ ಅಯಾಮಗಳು ಇವೆಲ್ಲವನ್ನು ಚಿತ್ರಿಸುತ್ತಾ ಹೋಗುತ್ತಾರೆ.

**ಭೂಮಿ**

ಈ ಕಥೆಯಲ್ಲಿ ಅಸಾಧ್ಯವದೊಂದು ಕಲ್ಪನೆಗಳನ್ನು ಬಳಸಿ ಕೊಳ್ಳುವುದರ ಮೂಲಕ ದುರ್ಬಲವರ್ಗದವರ ಕನಸು, ಆ ಕನಸುಗಳನ್ನು ಹೀಡೆರಿಸಿಕೊಳ್ಳಲು ಸ್ವೀಕರಿಸುವ ಸವಾಲು, ಪ್ರಕೃತಿ ಮತ್ತು ಮನುಷ್ಯನ ಸಂಬಂಧ, ಪಾಳೆಗಾರರ ಅಧಿಕಾರ, ಅವರ ದೌರ್ಜನ್ಯ, ಹಿಂಸಿಸುವ ಪ್ರವೃತ್ತಿ, ಪರಂಪರೆಯಿಂದ ತಮ್ಮ ಮೇಲಾಗುತ್ತಿರುವ ಅನ್ಯಾಯವನ್ನು ದೊಂಬನ ಮೂಲಕ ಎದುರಿಸುವ ಪ್ರಯತ್ನ, ಪಾಳೆಗಾರನ ಕ್ರೋಧ, ಹತಾಸೆ, ಸೋಲೊಪ್ಪಿಕೊಳ್ಳದ ಮನಸ್ಸು, ಅಸಹಾಯಕ ಹೆಣ್ಣೊಬ್ಬಳ ಶಾಪ, ದೊಂಬನ ಕನಸು, ಅವನ ಪ್ರಯತ್ನ, ಭೂಮಿಯ ಮೇಲಿನ ಅವನ ಅಸ್ತಿತ್ವ, ಕೊನೆಗೆ ಭೂಮಿಯಲ್ಲಿ ಒಂದಾದ ಬಗೆ ಇವೆಲ್ಲವನ್ನು ಚಿತ್ರಿಸುತ್ತಾ ಹೊಗುತ್ತಾರೆ.

**ಪ್ರಾಣಿಗಳು**

ಈ ಕಥೆಯಲ್ಲಿ ಮನುಷ್ಯನ ಸ್ವಾರ್ಥ, ವಿನೋಧಕ್ಕಾಗಿ ಮಾಡಿದ್ದು ಇಡೀ ಕೇರಿಯ ಮೇಲೆ ಉಂಟು ಮಾಡಿದ ಪರಿಣಾಮ, ಗೌಡರ ಅಧಿಕಾರ ಚಲಾವಣೆ, ತಾನು ಕೆಳಗೆ ಬೀಳಲು ಹೊಲಗೇರಿಯ ಜನರೇ ಕಾರಣ ಎಂಬ ಮನೋಭಾವ, ಒಂದು ಘಟನೆ ಅನೇಕ ಸಮಸ್ಯೆಗೆ ಜಗಳಕ್ಕೆ ಕಾರಣವಾದದ್ದು, ತಮ್ಮ ತಪ್ಪನ್ನು ಇನೊಬ್ಬರ ಮೇಲೆ ಆರೋಪಿಸುವ

ಪ್ರವೃತ್ತಿ, ಜ್ಯಾತಿ ವೈಷಮ್ಯ, ಬೀದಿ ಜಗಳ, ತನ್ನ ಹಳೇಕಾಲದ ಸಂಬಂಧಗಳ ನೆನಪು, ಶಿಕ್ಷೆ, ಇವೆಲ್ಲವುಗಳನ್ನು ಹಿಡಿದುಕೊಡುವ ಪ್ರಯತ್ನವನ್ನು ಮಾಡಿದ್ದಾರೆ.

**ಕೊಂಡ**

ಈ ಕಥೆಯು ಒಂದು ಊರಿನ ರಾಜಕೀಯ, ಸ್ವಾರ್ಥ, ಹಬ್ಬದ, ಕುಣಿತ, ಕುಡಿತಗಳ ನಡುವೆ ನಡೆಯುವ ಕ್ರಿಯೆ, ರಂಗೇಗೌಡ ತನ್ನ ಹಟ್ಟಿ ಬಿಟ್ಟು ದಲಿತರಲ್ಲಿ ಉಳಿದದ್ದು, ಮಾರಿದೇವಾಲಯದಲ್ಲಿಯೇ ಅವನ ಜೀವನ, ರಂಗೇಗೌಡರ ಮಕ್ಕಳು ಶಿಕ್ಷಣ ಪಡೆದದ್ದು, ಪೇಟೆಯ ಸಂಸ್ಕೃತಿಯನ್ನು ಅನುಕರಣೆಗೊಳಿಸಿದ್ದು, ಹೊಲಗೇರಿಯ ಚಿಕ್ಕಣ್ಣ ರಂಗೇಗೌಡರ ಸಂಬಂಧ, ದೈಹಿಕ ಹಸಿವು, ಪುರುಷನ ಬೋಗಕ್ಕೆ, ದ್ವೇಷಕ್ಕೆ ಚಿಕ್ಕಣ್ಣನ ತಂಗಿ ಸಾವಿತ್ರಿ ಬಸರಿಯಾದದ್ದು, ಚಿಕ್ಕಣ್ಣ ತನ್ನ ತಂಗಿಯನ್ನು ಕೊಲೆ ಮಡಿದ್ದು, ಮಾರಿ ಹಬ್ಬದ ಆಚರಣೆ, ವ್ಯಕ್ತಿ ವ್ಯಕ್ತಿಗಳ ನಡುವಿನ ವೈಮನಸ್ಯ, ಕುಂಡಪ್ಪನ ಭಕ್ತಿ, ಅವನ ಮೋಹಕ ತಮಟೆ ಬಡಿತ, ಕುಂಡಪ್ಪ ಕೊಂಡಕ್ಕೆ ಬಿದ್ದದ್ದು ಇವೆಲ್ಲವನ್ನು ನಿರೂಪಕರು ಸುಪ್ತ ಪಾತ್ರದ ಮೂಲಕ ಚಿತ್ರಿಸುತ್ತಾ ಹೋಗುತ್ತಾರೆ.

ಹೀಗೆ ನಿರೂಪಕರು ಕಥೆಯ ಮಧ್ಯದಲ್ಲಿ ಸುಪ್ತ ಪಾತ್ರವಾಗಿದ್ದು ಕೊಂಡು ಕಥೆಯ ಎಲ್ಲ ಪಾತ್ರಗಳ ಬಗ್ಗೆ ನಿರೂಪಿಸುತ್ತ ಹೋಗುತ್ತಾರೆ. ಆ ಮೂಲಕ ಕಥೆ ಒಳಗೂ ಹೋರಗುಗಳನ್ನು ಬಿಚ್ಚಿಡುತ್ತಾ ಹೋಗುತ್ತಾರೆ. ಆ ಮೂಲಕ ಕಥೆಯ ಪ್ರತಿಯೊಂದು ಪಾತ್ರಗಳ ಮನಸ್ಸನ್ನು ತೋರಿಸುತ್ತಾ ಹೋಗುತ್ತಾರೆ.

**೬) ಒಂದು ಸೃಜನ ಶೀಲಕತೆಯ ಒಳಗಡೆ ಇನೊಂದು ಸೃಜನಶೀಲತೆಯ ಕಥೆಯನ್ನು ಕಟ್ಟಿಕೊಡುವುದು**

ಈ ತಂತ್ರದ ಮೂಲಕ ಕಥೆಯ ಸಂದರ್ಭ ಸನ್ನಿವೇಶಕ್ಕೆ ಅನುಗುಣವಾಗಿ ಅಜ್ಜಿ ಅಥವ ತಾತ ಹೇಳುತ್ತಿದ್ದ ಕಥೆಗಳನ್ನು ಬಳಸಿಕೊಂಡು ತಮ್ಮ ಕಥೆಯನ್ನು ಹೆಣೆಯುತ್ತಾ ಹೋಗುತ್ತಾರೆ.

**ಅತ್ತೆ**

ಈ ಕಥೆಯಲ್ಲಿ ಗಂಡು ಹೆಣ್ಣುಗಳ ಸಂಬಂಧವನ್ನು ಹೇಳುವಂತಹ ಕಥೆಯನ್ನು ಹೇಳುತ್ತಾರೆ. " ಭೂಮಿಯ ಮೇಲೆ ಪೂರ್ವಿಕರು ಮೊದಲಿಗೆ ಎರಡು ಬೀಜಗಳನ್ನು ಬಿತ್ತಿದರಂತೆ. ಅವುಗಳಲ್ಲಿ ಒಂದು ಹೆಣ್ಣು ಮತ್ತೊಂದು ಗಂಡು. ಆ ಎರಡು ಬೀಜಗಳು ಮೊಳಕೆ ಹೊಡೆಯುವಾಗ ಹೆಣ್ಣು ಬೀಜವು ಕುಲಪಿತರ ಬಳಿ ಕೇಳಿತಂತೆ. ತಂದೆಯೇ ನಾನು

ಈ ಭೂಮಿಯ ಮೇಲೆ ಚಿಗುರಿ ಹೂಬಿಟ್ಟು ಕಾಯಾಗುವ ಕಾಲದಲ್ಲಿ ನನಗೆ ನನ್ನನ್ನು ಕಾಯುವಂತದೇ ಹೆಣ್ಣು ಕೊಡು, ಜೊತೆಗೆ ಈ ಬೀಜಕ್ಕೆ ಜೀವವಾಗುವ ಮತ್ತೊಂದು ಗಂಡುಬೀಜವೂ ನನ್ನೊಳಗೇ ಮೂಡುವಂತಹ ವರಕೊಡು ಎಂದಿತಂತೆ. ಆಗ ಗಂಡು ಬೀಜವು ಮೊಳೆತ ಮೇಲೆ ಅದೂ ಕೂಡ ಕೇಳಿಕೊಂಡಿತಂತೆ; ನನ್ನ ಪಿತನೇ ನಾನು ಈ ಭೂಮಿಯ ಸರ್ವವನ್ನೂ ಭೋಗಿಸುವ, ಸರ್ವ ವಸ್ತು ಜೀವ ಸಂಗತಿಗಳನ್ನೂ ಕಾಮಿಸುವ ಶಕ್ತಿಯನ್ನು ಕೊಡು ಎಂದು. ಆ ಪೂರ್ವಿಕರು ಇಬ್ಬರ ಕೇಳಿಕೆಯನ್ನೂ ಮನ್ನಿಸಿ ಒಪ್ಪಿದರಂತೆ."

**ತಣಿಗೆ**

ಈ ಕಥೆಯಲ್ಲಿ ತಣಿಗೆ ದೈವಿಕ ವಸ್ತುವಾಗಿ ಕಂಡು ಬರುತ್ತದೆ. ಅಂತಹ ತಣಿಗೆಯ ಶಕ್ತಿಯ ಬಗ್ಗೆ ಒಂದು ಕಥೆಯನ್ನು ಬಳಸಿಕೊಂಡಿದ್ದಾರೆ. "ಒಮ್ಮೆ ಕೇರಿಯ ಮಾತು ಬಾರದ 'ಮೂಗಿಯೂ ಕುರುಡಿಯೂ ಆಗಿದ್ದವಳೊಬ್ಬಳನ್ನು ಯಾರೋ ಕೆಡಿಸಿ ಆಕೆ ಬಸುರಿಯಾಗುವಂತೆ ಮಾಡಿದ್ದರು. ಏನೆಲ್ಲ ಹುಡುಕಾಟ ಆದ ಮೇಲೆ ತಣಿಗೆ ಶಾಸ್ತ್ರದ ಹಂತ ಬಂತು. ಆ ತಣಿಗೆಯನ್ನು ಪೂಜೆ ಮಾಡಿ ಅದನ್ನು ನೆಲದ ಮೇಲಿಟ್ಟು ತಾತ ಹಿಡಿದುಕೊಂಡರೆ, ಅದು ದರದರನೆ ಜರುಗುತ್ತಾ ಯಾರು ತಪ್ಪಿತಸ್ತರೆಂದು ಹುಡುಕಿ ಅವರ ಮುಂದೆ ನಿಲ್ಲುತ್ತಿತ್ತು. ಕೆಲವರು ಹೆದರಿದರು. ಆ ತಣಿಗೆ ಜರುಗುತ್ತಾ ಬಂದು ಕೇರಿ ದಾಟಿ ರಸ್ತೆಗೆ ಹರಿದು ಗೌಡರ ದೊಡ್ಡ ತೋಟದ ಹಾದಿಗೆ ಬಂತು."

"ಇಂಗೇ ಒಂದೂರಿತ್ತಂತೆ ಆ ವೂರಲ್ಲಿ ಬೇಕಾದಂತೆ ಬಾಳ್ವೆ ಮಾಡಿ ಯಂತೆಂತದೋ ಕಸ್ಟಾನೆಲ್ಲ ನೀಗಿ ಲೋಕ್ದಲ್ಲಿ ಇಲ್ದೇ ಇರೋ ಶಿಕ್ಷನೆಲ್ಲಾ ವುಂಡು ಅಂಗೋ ಇಂಗೋ ಒಬ್ಬಯ್ಯ ಬದ್ಕಿದ್ನಂತೆ ಅವುನ್ಗೆ ಮನೆ ತುಂಬ ಮಕ್ಕಳು ಮೊಮ್ಮಕ್ಕಳು ಇಲ್ರೂ ಇದ್ರಂತೆ ಆದ್ರೆ ಅವಯ್ಯನಿಗೆ ಒಂದು ದೋಸಾ ಇತ್ತಂತೆ ಆದೋಸಾ ಅಂದ್ರೆ ಇಲ್ರೂ ಸಾವ್ನೂ ನೋಡ್ತಾ ನೋಡ್ತಾ ತಾನ್ ಮಾತ್ರ ಸಾಯಕಾಗ್ದೆ ಇರುವಂತ ಸಾಪ ಇತ್ತಂತೆ"

**೭). ನಿರೂಪಕರೇ ಪಾತ್ರದಾರಿಯಾಗಿ ಕಥೆ ಹೇಳುತ್ತಾ ಹೋಗುವುದು.**

ಈ ತಂತ್ರದಲ್ಲಿ ನಿರೂಪಕರು ಕಥೆಯ ಒಂದು ಪಾತ್ರವಾಗಿ ನಿರೂಪಿಸಿತ್ತಾ ಹೋಗುತ್ತಾರೆ. ತಮ್ಮ ಸುತ್ತ ಮುತ್ತಲು ನಡೆಯುತ್ತಿರುವ ಘಟನೆಗಳನ್ನು ತಾವು ಕಂಡಂತೆ ಚಿತ್ರಿಸುತ್ತಾ ಹೋಗುತ್ತಾರೆ. ಹಬ್ಬ, ಕಾಲ, ಮಾದರಿ, ತೋಪು ಕಥೆಗಳನ್ನು ಉದಾಹರಣೆಯಾಗಿ ನೋಡಬಹುದು.

**ಹಬ್ಬ**

ಈ ಕಥೆಯಲ್ಲಿ ನಿರೂಪಕ ಹಬ್ಬದ ಸಂಭ್ರಮ, ಸಡಗರ, ಬಲಿ ಕುಂಡಣ್ಣನ ತಮಟೆಯ ವೈಕರಿ, ಹಳ್ಳಿಯ ರಾಜಕೀಯ, ಸ್ವಾರ್ಥ, ದ್ವೇಷ, ಸ್ಪರ್ಧೆ, ಅಸಹಾಯಕತೆ, ಪೇಟೆಯ ಬದುಕಿನ ಬಗ್ಗೆ ಬೇಸರ. ಜಾತಿ ರಾಜಕೀಯ, ಹಿರಿಯರ ಸಮಾಧಾನ, ಅತ್ತೆಯ ಆವೇಶ, ದೌರ್ಜನ್ಯ, ಪ್ರತಿಕಾರ ಇವಲ್ಲವುಗಳನ್ನು ತೆರೆದಿಡುತ್ತಾ ಹೋಗುತ್ತಾರೆ.

**ಕಾಲ**

ಈ ಕಥೆಯಲ್ಲಿ ನಗರ ಜೀವನದ ಒಂದು ಸಣ್ಣ ವಟಾರದ ಬದುಕಿನ ಬಗ್ಗೆ ಹೇಳುತ್ತಾ ಹೋಗುತ್ತಾರೆ. ತನ್ನ ಮದುವೆ ವಿಷಯವಾಗಿ ತನ್ನ ಚಿಕ್ಕಪ್ಪನ ಹತ್ತಿರ ಮಾತನಾಡಲು ಹೋಗಿದ್ದಂತಹ ಸಂದರ್ಭದಲ್ಲಿ ತನಗಾಗುತ್ತಿರುವ ಅನುಭವದ ಬಗ್ಗೆ ಹೇಳುತ್ತಾ ಹೋಗುತ್ತಾರೆ. ಅಲ್ಲಿ ಸಂತೋಷ, ಸಂಭ್ರಮ, ನೋವು, ದುಃಖ, ಹುಟ್ಟು, ಮುಗ್ಧ ಮನಸ್ಸುಗಳಲ್ಲಿ ಉಂಟಾದ ಕುತೂಹಲ ಇವುಗಳೆಲ್ಲದರ ಮೂಲಕ ಒಂದು ವಟಾರದಲ್ಲಿ ನಡೆಯುವ ಘಟನೆಗಳನ್ನು ಹೇಳುತ್ತಾ ಹೋಗುತ್ತಾರೆ.

**ತೋಪು**

ಈ ಕಥೆಯಲ್ಲಿ ಲೇಖಕರೇ ನಿರೂಪಕರಾಗಿ ಪಾತ್ರಧಾರಿಯಾಗಿ ಘಟನಾವಳಿಗಳನ್ನು ಚಿತ್ರಿಸುತ್ತ ಹೋಗುತ್ತಾರೆ. ಸಹೃದಯನಿಗೆ ಹೇಳುತ್ತಿರುವಂತಿದೆ. ಪರಂಪರೆಯ ಪ್ರಯೋಗದ ನೆಲೆಯಲ್ಲಿ ನಿರೂಪಿತವಾಗಿದೆ ಕಥೆಗಾರ ಹಾಗು ಸಹೃದಯರ ನಡುವಿನ ಸಂಬಂಧವು ಅವ್ಯಕ್ತವಾಗಿದ್ದು ಮೂರ್ತಿಭವಿಸುವ ಕ್ರಿಯಾತಂತ್ರ ಇದರಲ್ಲಿದೆ. ತಾವು ಕೇಳಿದ ನೋಡಿದ ಪಡೆದ ಅನುಭವಗಳನ್ನು ಭೂತಕಾಲದ ಅನುಭವಗಳನ್ನು ವರ್ತಮಾನದಲ್ಲಿ ನಿರೂಪಿಸುತ್ತಾ ಹೋಗುತ್ತಾರೆ

ಬಾಲ್ಯದ ಅನುಭವಗಳು, ಅಜ್ಜಿ ಹೇಳುತ್ತಿದ್ದ ಬಿಲ್ವಪತ್ರೆ ಮರದ ಕಥೆ, ಕಥೆಯಲ್ಲಿ ಪರಿಸರದ ಮೂಲಕ ಪ್ರಕೃತಿಗೂ ಮನುಷ್ಯನಿಗೂ ಇರುವಂತಹ ಸಂಬಂಧ, ಒಂದೊಂದು ಮರವು ಪೂರ್ವಿಕರ ನೆನಪುಗಳಾಗಿದ್ದದ್ದು, ರಾಜಕೀಯ, ನಾಗರೀಕತೆ, ಮನುಷ್ಯ ಮತ್ತು ಪ್ರಕೃತಿಯ ನಡುವಿನ ಸಂಬಂಧವನ್ನು ನಾಶ ಮಾಡಿದ್ದು ಇವೆಲ್ಲವನ್ನು ಹೇಳುತ್ತಾ ಹೋಗುತ್ತಾರೆ.

**೮). ಪರಂಪರೆಯ ಪ್ರತಿನಿಧಿಗಳಾದ ಅಜ್ಜ, ಅಜ್ಜಿ, ಅಥವ ಒಬ್ಬ ಹೆಂಗಸು ಕಥೆ ಹೇಳುತ್ತಿದ್ದಳು ಎಂದು ಹೇಳುವುದರ ಮೂಲಕ ಕಥೆ ಪ್ರಾರಂಭ ಮಾಡುವುದು.**

ಬಾಳು, ಭೂಮಿ ಜೀವ ಸೂರ್ಯವತಿ ಈ ಕಥೆಗಳನ್ನು ಉದಾಹರಣೆಗೆ ಗಮನಿಸಬಹುದು.

**ಬಾಳು**

"ಕತ್ತಲು ತುಂಬಿದ ಹೊತ್ತಲ್ಲಿ ಹಜಾರದ ನಡುವೆ ಮಲಗಿದ್ದ ತಂಗಿಯರಿಗೆ ಮಾರೆ ಕಥೆ ಹೇಳುತ್ತಿದ್ದಳು ಗಾಳಿ ಯಾರ ಹಂಗು ಇಲ್ಲದೆ ಹೊರಗೆ ರಾತ್ರಿಯ ಜೊತೆ ಊರನ್ನೆಲ್ಲ ಸುತ್ತುತ್ತಿತ್ತು. ತನ್ನ ಬಾಲ್ಯ ಕಾಲದಿಂದಲೂ ಇಂಥ ಹೂಂಗುಟ್ಟುವಿಕೆಯ ಕತೆ ಕೇಳುವಿಕೆಯಲ್ಲೇ ಬದುಕಿನ ಜೊತೆ ಮುಖಾಮುಖಿಯಾಗುವುದನ್ನು ಕರಗತ ಮಾಡಿಕೊಂಡಿದ್ದ ಮೂಗಿ, ಮಾರೆಯ ಕೊನೆಯ ತಂಗಿ ಈಗ ಅವಳಕ್ಕನ ಕತೆಗೆ ತಲ್ಲೀನಳಾಗುತ್ತಾ ಹಾರಾಡುವ ಕನಸುಗಳ ಮಾಂತ್ರಿಕ ಚಾಪೆಯನ್ನು ಹೆಣೆಯುತ್ತಿದ್ದರು."

**ಭೂಮಿ.**

"ಮತ್ತದೇ ಆಕಾಶ ತನ್ನೆಲ್ಲ ನಕ್ಷತ್ರಗಳ ಸಾಕ್ಷಿಯಲ್ಲಿ ರಾತ್ರಿಯ ಕತ್ತಲನ್ನು ಜಗಿಯುತ್ತಿತ್ತು. ಎಂದಿನಂತೆಯೇ ನೀರವತೆಯ ಆಕಳಿಕೆಯಲ್ಲಿ ಕೇರಿ ತೂಕಡಿಸುತ್ತಿತ್ತು. ಯಾವತ್ತು ಮುಗಿಯದ ಅತಂತ್ರಗಳ ಮೇಲೆ ಕಲ್ಪನೆಯ ದೋಣಿ ಕಟ್ಟಿ, ಅದರಲ್ಲಿ ಕುಳಿತು ನಾವೆಲ್ಲ ತೇಲಿ ತೇಲಿ ದೂರ ದೂರಕ್ಕೆ ಹಾರಿಹೋಗುತ್ತಿದ್ದೆವು. ಅದೇ ಹಳೆಯ ಕಾಲದ ನಮ್ಮ ಪೂರ್ವಿಕರ ಕತೆಯನ್ನು ನಮ್ಮ ತಾತ ದಣಿದ ತನ್ನ ಕಾಲಾಂತರದ ಸ್ವರದಲ್ಲಿ ನಿಧಾನಕ್ಕೆ ಹೇಳುತ್ತಿದ್ದ. ಭೂಮಿತಾಯಿ ನಮ್ಮನ್ನೆಲ್ಲ ತನ್ನ ಹೊಟ್ಟೆಯ ಮೇಲೆ ಮಲಗಿಸಿಕೊಂಡು, ಗಾಳಿ ಬೀಸಿನ ಜೋಗುಳ ಹಾಡಿಸಿದಂತೆ ಏನನ್ನೋ ಆಲೋಚಿಸಿಸುತ್ತಿದ್ದಳು. ನಾವಿಲ್ಲ ಹಿಂಡು ಬಳಗದ ಹೈಕಳು ನಮ್ಮ ಪೂರ್ವಿಕರ ಕನಸನ್ನು ಮನಸ್ಸಿಗೆ ಬಿತ್ತಿಕೊಂಡು ಆಲಿಸತೊಡಗಿದೆವು."

**ಜೀವ.**

"ರಾತ್ರಿಯ ವೇಳೆ ಕೇರಿಯ ಅಂಗಳದಲ್ಲಿ ದೊಡ್ಡ ಹಟ್ಟಿಯ ಹೈಕಳು, ನಾವೆಲ್ಲ ಮಲಗಿ ಮಾಂತ್ರಿಕ ಕತೆಗಳ ರೆಕ್ಕೆಗಳ ಮೇಲೆ ಉರುಳಾಡಿ ಎಷ್ಟೋ ಹೊತ್ತಿನ ತನಕ ನೀಹಾರಿಕೆಗಳನ್ನು ಅಟ್ಟಿಸಿಕೊಂಡು ಹೋಗಿ ಅಲ್ಲೇ ಮೀಯುತ್ತ ಕಾಲಾತೀತರಾಗುತ್ತಿದ್ದೆವು. ನಮ್ಮ ಕೇರಿಯಲ್ಲಿ ಹಣ್ಣಾದ ಮುಪ್ಪಿನ ಮುದುಕ ದೇವಯ್ಯ ಆಕಾಶದ ಬಗ್ಗೆ ಎಂದೆಂದೂ ಮುಗಿಯದ ತನ್ನ ದಣಿವಿನ ಕತೆಗಳನ್ನು ನಮ್ಮ ಮನಸ್ಸಿನ ಒಳಕ್ಕೆ ಬಿತ್ತುತ್ತಲೇ ಇದ್ದ. ಆ ತಾರೆಗಳಾಚೆ ಎಂತದೊ

ಊರು ಇದೆಯೆಂದು, ಅಲ್ಲಿ ಮನುಷ್ಯರು ಇದ್ದಾರೆಂದು ವರ್ಣಿಸುತ್ತಿದ್ದ. ಕಸ ಮುಸರೆಯಲ್ಲಿರುವ ನಮ್ಮಂಥವರನ್ನು ಅವರು ಮೂಸಿಯೂ ನೋಡುವುದಿಲ್ಲವೆಂದೂ, ನಾವಿರುವ ಈ ಲೋಕ ಮಹಾ ನರಕವಾದ್ದರಿಂದ ಅವರು ಇತ್ತ ಕಡೆ ನೆನೆಪು ಕೂಡ ಮಾಡುವುದಿಲ್ಲ ಎಂದು ಹೇಳುತ್ತಿದ್ದ."

**ಸೂರ್ಯವತಿ.**

ಕಳೆದ ರಾತ್ರಿಯಷ್ಟೇ ಅತ್ತೆ ಜಗಳವಾಡಿ ಮುನಿಸಿಕೊಂಡು ಹಿತ್ತಿಲು ಮನೆಯ ಗುಡಿಸಲು ಸೇರಿಕುಂಡು ತನ್ನ ಪೂರ್ವಿಕರನ್ನೆಲ್ಲ ನೆನೆಯುತ್ತ, ಹಿತ್ತಲ ಅಂಗಳದಲ್ಲಿ ಜಗಳದ ತೀರ್ಮಾನಕ್ಕೆ ಕರೆಯುವಂತೆ ದುಃಖಿಸುತ್ತಾ ಒಬ್ಬಳೇ ಮಾತನಾಡಿಕೊಳ್ಳುತ್ತಿದ್ದಳು. ಹಿತ್ತಿಲ ತುಂಬ ಬೆಳದಿಂಗಳು ಹರಿಯುತ್ತಿತ್ತು. ಬೇಲಿ ಮೇಲಿನ ಹೂಗಳ ಸಾಲಿನಲ್ಲಿ ಮಿಣುಕು ಹುಳುಗಳು ಯಾರ್ಯಾರನ್ನೋ ಹುಡುಕಾಡುತ್ತಿದ್ದವು. ಮನೆಯಲ್ಲಿ ನಡೆವ ಜಗಳಾಟದಲ್ಲಿ ಮತ್ತದೇ ಮುಗಿಯದ ರಾತ್ರಿಗಳಲ್ಲಿ ಎಂದಿನಂತೆ ಅತ್ತೆ ಏನಾದರೂ ಹೇಳುತ್ತಾಳೆಂದು ಕಾಯುತ್ತಾ.................... ದುಃಖ ಮರೆತು ತಾಂಬೂಲದ ಜೊತೆ ಬೇಸರವ ಜಗಿದು ಅತ್ತೆ ನಿಟ್ಟುಸಿರು ಬಿಟ್ಟು, ಹಿಂದೆ ಅವಳು ಅವಳೊಬ್ಬಳಿದ್ದಳಲ್ಲ ಅವಳು............. ಎಂದು ಕಥೆ ಹೇಳಲು ಪ್ರಾರಂಭಿಸಿದಳು.

## ೭.೪ ಶೈಲಿ

ಆನೆ ನಡೆದದ್ದೆ ದಾರಿ ಎಂಬಂತೆ ಎಲ್ಲಾ ಕಥೆಗಾರರು ಅನುಸರಿಸುತ್ತಿದ್ದ ಮಾರ್ಗವನ್ನು ಬಿಟ್ಟು ಮೊಗಳ್ಳಿಯವರು ಕಥೆಗಳನ್ನು ರಚಿಸಲು ತಮ್ಮದೇ ಆದಂತಹ ಹೊಸ ಮಾರ್ಗವನ್ನು ಕಂಡು ಕೊಂಡಿದ್ದು ಆ ಮಾರ್ಗದಲ್ಲಿ ತಮ್ಮ ಕಥೆಗಳನ್ನು ರಚನೆ ಮಾಡಿದ್ದಾರೆ. ಅವರದೇ ಆದಂತಹ ಶೈಲಿಯಲ್ಲಿ ಕಥೆಗಳನ್ನು ಹೆಣೆದಿದ್ದಾರೆ. ಒಂದು ಕಥೆಯ ಶೈಲಿಗೂ ಇನ್ನೊಂದು ಕಥೆಯ ಶೈಲಿಗೂ ಭಿನ್ನತೆ ಇದೆ. ಮೊಗಳ್ಳಿಯವರ ಕಥೆಗಳಲ್ಲಿ ಪಾತ್ರಗಳೆ ಕಥೆಯ ಆರಂಭ ಮಾಡುತ್ತವೆ ಹಾಗು ಅಂತ್ಯವನ್ನು ಮಾಡುತ್ತವೆ. ಮೊಗಳ್ಳಿ ಗಣೇಶ್‌ರವರ ಕಥೆಗಳಿಗೆ ಜನಪದ ಪ್ರಭಾವವಿರುವುದರಿಂದ ಅವರ ಕಥೆಗಳಲ್ಲಿ ಗದ್ಯ ಪದ್ಯ ಮಿಶ್ರಿತ ಭಾವಗೀತಾತ್ಮಕ ಶೈಲಿಯನ್ನು, ಸಂಭಾಷಣಾತ್ಮಕ ಶೈಲಿಯನ್ನು ಗುರುತಿಸಬಹುದು. ಉದಾಹರಣೆಗೆ ತೋಪು, ಹಬ್ಬ, ಮಾದಾರಿ ಈ ಕಥೆಗಳಲ್ಲಿ ಪಾತ್ರವೇ ಕಥೆಯ ಆರಂಭವನ್ನು ಮತ್ತು ಅಂತ್ಯವನ್ನು ಮಾಡುವುದನ್ನು ಗುರುತಿಸಬಹುದು.

ಮಾದಾರಿ.

ಬಿಸಿಲು ಹೊಳೆಯುತ್ತಿತ್ತು. ರಸ್ತೆಯಲ್ಲಿ ಅನೇಕ ಚಕ್ರಗಳಿಂದ ಸವೆಯುತ್ತಿದ್ದವು. ಆಗಲೇ ಜನ ಗಡಿಬಿಡಿಯ ಜಾಡಿನಲ್ಲಿ ಓಡಾಡುತ್ತಿದ್ದರು. ಮಕ್ಕಳು ಶಾಲೆಗಳ ಕಡೆ ಯಾಂತ್ರಿಕವಾಗಿ ನಡೆಯುತ್ತಿದ್ದವು. ವ್ಯಾಪಾರಿ ಅಂಗಡಿಗಳು ಜನಸಾಗರದಲ್ಲಿ....ಎಂದು ಆರಂಭಿಸಿ ಸಾಂತ್ವನ ಹೇಳುವುದು ಕೃತಕ ಅನಿಸಿತು. ಇದೆಲ್ಲ ನಮ್ಮಂತವರ ಕತೆ ಎಂದು ಹೊರಟು ಬಂದೆ. ತಲೆಯ ಮೇಲೆ ವಿಮಾನ ಬಹಳ ಸುಂದರವಾಗಿ ಕಾಣುತ್ತ ಹಾರುತ್ತ ಮಾಯವಾಗುತ್ತಿತ್ತು. ಆ ಮೋಚಿ ಅದನ್ನೊಮ್ಮೆ ತಿರಸ್ಕಾರದಿಂದೆಂಬಂತೆ ನೋಡಿ ಎಲೆ ಅಡಿಕೆ ಜಗಿದಿದ್ದನ್ನು ತುಪುಕ್ಕನೆ ಉಗಿದ. ಕೆಂಪು ಕೆಂಪಗೆ ಅಲ್ಲೆಲ್ಲ ಎಲೆ ಅಡಿಕೆ ರಸ ರಕ್ತದಂತೆ ಚಲ್ಲಿಕೊಂಡಿತ್ತು. ಎಂದು ಪ್ರಾರಂಭಿಸಿದವರೇ ಅಂತ್ಯಮಾಡುತ್ತಾರೆ.

**ತೋಪು**

ಹಳೆಯ ಮರಗಳನ್ನು ನೋಡುವುದೆಂದರೆ ನನಗೆ ಬಹಳ ಹಿತವಾದ ಕೆಲಸ. ಆ ಮರಗಳಲ್ಲಿ ಮೈಮರೆತು ಹತ್ತಾರು ಬೇಸರಗಳನ್ನು ಮರೆತು ಬಿಡುತ್ತೇನೆ. ನಮ್ಮ ಪೂರ್ವಿಕರೂ ಕೂಡ ಅದರಂತೆಯೇ ತಲೆ-ತಲಾಂತರಗಳಿಂದ ಎಲ್ಲೆಡೆ ಮರ ಬೆಳೆಸಿದ್ದರು. ಎಂದು ಆರಂಭಿಸಿ ಒಂದೂರಿನಲ್ಲಿ ಒಂದು ತೋಪಿತ್ತಂತೆ. ಅದು ಅಳಿದ ಆಕಾಶದಂತೆ ಅದರೆತ್ತರಕ್ಕೂ ಬೆಳೆಯುತ್ತಿತ್ತಂತೆ. ಅದರೊಳಗಿಂದ ಜೀವ ಪಕ್ಷಿಗಳು ಹುಟ್ಟಿ ಬೆಳೆದು ಹಾರಿ ಬಂದು ಹಾಡಿತ್ತಿದ್ದವಂತೆ ಎಂದು ಹೇಳಿ ಎಂದೆಂದೂ ಆ ತೋಪಿಗೆ ಅಲ್ಲಿನ ಪಾಡಿಗೆ ಅಂತ್ಯವೇ ಇಲ್ಲದಂತೆ ಎಂದೆಂದೂ ಅದು ವಿಕಾಸವಾಗುತ್ತ ನಮ್ಮನ್ನು ಬೆಳೆಸುತ್ತಿರುತ್ತದೆಂದು ಹೇಳಿ ಕತೆ ಮುಗಿಸಿ ಎದ್ದು ಆ ಕತ್ತಲ ರಾತ್ರಿಯಲ್ಲೇ ಪೇಟೆಯ ನನ್ನ ಬಾಳಿನತ್ತ ಹೋರಟೆ. ನಮ್ಮ ಪೂರ್ವಿಕರ ಮರಗಳ ವಾಸನೆ ಮೂಗು ಹಿಂಡುತ್ತಿತ್ತು. ಬೆನ್ನ ಹಿಂದೆ ಅವುಗಳ ರೆಂಬೆ ಬೀಸಿನ ಗಾಳಿ ಕಂಪು ಹಿಂಬಾಲಿಸುತ್ತಿರುವಂತೆ ಕಂಡಿತು. ನಾನು ಬೌದ್ಧ ವೃಕ್ಷದ ದಾರಿ ಹಿಡಿದು ಕತ್ತಲಲ್ಲೇ ನಡೆಯುತ್ತಿದ್ದೆ ಎಂದು ಮುಕ್ತಾಯ ಮಾಡುತ್ತಾರೆ.

**ಹಬ್ಬ**

ಸಡಗರದಲ್ಲಿ ಮುಳುಗಿರುವ ಊರ ಉನ್ಮಾದದ ಸಿರಿಯ ಅಲೆಗಳಲ್ಲಿ ಎಲ್ಲವನ್ನೂ ನೋಡತೊಡಗಿದೆ. ಎಲ್ಲೆಡೆ ನೆಂಟರು ನೆರೆದಿದ್ದರು. ಜಾತ್ರೆಯ ತುಂಬ ಜನರ ಗದ್ದಲ ರೆಕ್ಕೆ ಬಿಚ್ಚಿ ಹಾರಾಡುತ್ತಿತ್ತು. ಮನೆಯಂಗಳದಿ ಹುಡುಗಿಯರು ರಂಗೋಲಿ ಬಿಟ್ಟು ಹೊಳೆವ

ಕಂಗಳಲ್ಲಿ ಚಿಗುರು ಕನಸು ಬಿಂಬಿಸುತ್ತಿದ್ದರು. .................. ಎಂದು ಪ್ರಾರಂಭಿಸಿ ಕ್ಷಣಮಾತ್ರದಲ್ಲಿ ಜಾತ್ರೆ ಚೆಲ್ಲಾಪಿಲ್ಲಿಯಾಗಿ ದಂಗೆಯ ದಿಕ್ಕೆಟ್ಟ ಸ್ಥಿತಿಯಂತಾಯಿತು. ಆ ಗದ್ದಲದಲ್ಲಿ ಅತ್ತೆಯೂ ಮಾಯವಾಗಿದ್ದಳು. ಊರಿಗೆ ಕೇಡು ಬಡಿಯಿತೊ ಮರವ್ವನ ದಯೆ ಬಂದಿತೊ ಎಂದು ಜನ ಗೊಂದಲಗೊಂಡರು, ನನ್ನೊಳಗೆ ಯಾವುದೊ ನ್ಯಾಯದ ಗಂಟೆಯ ಸದ್ದು ಮೊಳಗಿದಂತಾಗಿ ನಾಳೆಗೆ ನಡೆದೆ.

ಬಣ್ಣ

ಆ ಒಂದು ದೊಡ್ಡ ಬುಟ್ಟಿಯಲ್ಲಿ ಚಂದದ ಎಲ್ಲ ಬಣ್ಣಗಳ ಚಿಲುಮೆ ಬುಗ್ಗೆಯೇ ಹರಿಯುತ್ತಿರುವಂತೆ ಕಂಡಿತು. ಅತ್ಯಾಶ್ಚರ್ಯದಿಂದ ಇದೇನಯ್ಯಾ ಎಂದು ಪ್ರಸಾದ್ ಕೇಳಿದರು. ಆ ಮನುಷ್ಯ ದಿವ್ಯ ಮಂದಸ್ಮಿಕ ದನಿಯಲ್ಲಿ "ಇವು ಕನಸು ಸ್ವಾಮಿ, ಕನಸು ಸ್ವಾಮಿ, ಕನಸು" ಎಂದ.

"ಆಹಾ! ಕನಸೇ, ಇಲ್ಲಿ ಯಾವ ಕನಸೂ ಇಲ್ಲವಲ್ಲಯ್ಯ"

"ನೀವು ಆತ್ಮದ ಕಣ್ಣಿನಿಂದ ನೋಡಿದರೆ ಮಾತ್ರ ಆ ಕನಸು ಕಾಣುತ್ತವೆ"

"ಹೌದೇ"

"ಖಂಡಿತ ಸ್ವಾಮೀ"

"ಎಲ್ಲಯ್ಯಾ ಯಾವ ಕನಸು ಕಾಣ್ತಿಲ್ಲವಲ್ಲಾ"

"ಪ್ರೀತಿಯಿಂದ ತನ್ಮಯತೆಯಲ್ಲಿ ತಾಯ್ತನದಿಂದ ನೋಡಿ ಸ್ವಾಮಿ"

"ಎಲ್ಲ ಮಸಕಾಗಿದೆಯಲ್ಲಯ್ಯ"

"ನಿಮ್ಮ ಗೋಜಲುಗಳ ಬಿಟ್ಟು ಬಣ್ಣಗಳ ಉಸಿರು ತುಂಬಿ ನೋಡಿ ಸ್ವಾಮಿ"

ಹಾಗೇ ಪ್ರಸಾದ್ ತೀವ್ರವಾದ ಕುತುಹಲದಿಂದ ಮೈಮರೆತು ಬಣ್ಣಗಳ ಆ ಬುಟ್ಟಿಯನ್ನೇ ದಿಟ್ಟಿಸಿ ನೋಡಿದರು.

ರೈಲು ಜನ

'ಏನು ಓದಿದ್ದೀಯಪ್ಪಾ'

ಯೆಸೆಲ್ಸಿ ಫೇಲ್ ಸಾರ್

ಕೆಲ್ಸ?

'ಮುನ್ಸಿಪಾಲ್ಟಿಲಿ ಡ್ರೈನೇಜ್ ಸೂಪರ್ ವೈಸರ್ ಆಗಿದ್ದೀನಿ ಸಾರ್'

'ಸಂಬ್ಳ'

'ಐನೂರು ಸಾರ್'

'ಮಕ್ಕಳು'

'ನಾಲ್ಕು, ಮೂರೆಣ್ಣು ಒಂದ ಗಂಡು'

**ಮೋಹ**

"ಊರಿಗೆ ಹಿಂತಿರುಗಿ ಏನು ಮಾಡುವೆ"

"ನಮ್ಮಪ್ಪನ ಏಳು ಸುತ್ತಿನ ಕೋಟೆಯಲ್ಲಿ ಬಂಧಿಯಾಗುವೆ"

" ಆ ನಿಮ್ಮಪ್ಪ ಕೋಟೆಯ ದಿಡ್ಡಿ ಬಾಗಿಲು ಮುರಿದು ಬರಲೇ"

"ಹಾಗೆ ಬಂದರೆ ನಿನ್ನ ಮುಗಿಸಿಬಿಡುತ್ತಾರೆ"

"ಕಣ್ಣಿಗೆ ಕಾಣದ ಬಂದೂಕುಗಳು ಗುರಿಯಿಡುತ್ತವೆ"

**ಈ ಮೇಳಕುಂಟೇನು ಕೊನೆ**

ಆ ನಡುರಾತ್ರಿಯೂ ಗಡಗಡ ನಡುಗ್ತಾ, ಪಿಸುರುಗಾಳಿಗೆ ಮಿಸುಕಾಡ್ತಾ ಕೇರಿಯಾದ ಕೇರಿನೆಲ್ಲ ಕವುಚ್ಕಂದು ಇರೋ ಹೊತ್ತಿನಾಗೆ ಹಾಡೊಂದು ತೇಲುತ್ತಾ ಬಂದು

ಗಾಳಿಯು ನುಡಿತಾದೆ ನಿಲ್ರಯ್ಯ

ಬೂಮ್ತಾಯಿ ಕರಿತಾಳೆ ಕೇಳ್ರಯ್ಯ

ಗಾಳಿ ನೀರೂ ಭೂಮಿ ಗುಣವಾ ತಕ್ಕಂದೋಗ್ರಯ್ಯ

ಅಂತಿರಲು ಆ ಸಪ್ಪಟ್ಟು ಸರಿರಾತ್ರಿಲಿ ಹಾಲಕ್ಕಿ ಸಕುನಾವ ನುಡ್ದಂಗೆ ನುಡಿತಾ, ಕಲ್ಲಾಗಿ ನಿಂತಂತೋರ ಮುಂದೆ ನಿಂತ್ಕಂದು

ಸೀಮಿಂದ ಸೀಮಿಯ ದಾಟಯ್ಯ

ಗೆರೆಯಿಂದ ಗೆರೆಯ ಜಿಡ್ರಯ್ಯ

ಕೈಕೈಯ ಇಡ್ಕಂಡ್ ಕುಣಿರಯ್ಯ

ಎದಿಯಿಂದ ಎದಿಯ ಮುಟ್ರಯ್ಯ

**ಫ್ರಾಯ್ಡ್ ಕೇಳಿದ ಕೊನೆಯ ಕತೆ**

ಮಗಳ ಕರುಳ ಸೆಳೆತ ವಿಧಿಯಮ್ಮನನ್ನು ಜಗ್ಗಿ ಜಗ್ಗಿ ಅಲುಗಾಡಿಸಿತು.

ಹೇಳಲಾಗದು ಮಗಳೇ ಬಿಟ್ಟು ಬಿಡು ಈ ಹಠವಾ

ಕೇಳಿ ಸಹಿಸಲಾರೆ ನೀನು ನಿನ್ನ ವಿಧಿಯಾ

# ಅಧ್ಯಾಯ ನಾಲ್ಕು

# ಗ್ರಾಮೀಣ ಬದುಕಿನ ಚಿತ್ರಣ

ಮೊಗಳ್ಳಿ ಗಣೇಶ್ ರವರು ತಮ್ಮ ಬಾಲ್ಯದ ಜೀವನವನ್ನು ಹಳ್ಳಿಯಲ್ಲಿ ಕಳೆದಿದ್ದಾರೆ. ತಮ್ಮ ಬಾಲ್ಯದಲ್ಲಿ ಅನುಭವಿಸಿ ಕಂಡಂತಹ ಬದುಕನ್ನು ತಮ್ಮ ಕಥೆಗಳಲ್ಲಿ ಹೇಳಿದ್ದಾರೆ. ಅವರ ಬಹುತೇಕ ಕಥೆಗಳು ಗ್ರಾಮೀಣ ಬದುಕನ್ನೆ ಕುರಿತದ್ದಾಗಿದೆ. ಗ್ರಾಮೀಣ ಜನರ ನೋವು ನಲಿವುಗಳು, ಅವರ ಕಷ್ಟ-ಸುಖಗಳು, ಗ್ರಾಮೀಣ ಪರಿಸರದಲ್ಲಿ ಕಂಡು ಬರುವಂತಹ ದಿನನಿತ್ಯದ ಘಟನೆಗಳೇ ಅವರ ಕಥೆಯ ಘಟನೆಗಳಾಗಿವೆ. ಕೆಲವೊಂದು ಕಥೆಗಳನ್ನು ಹೊರುತು ಪಡಿಸಿದರೆ ಉಳಿದೆಲ್ಲಾ ಕಥೆಗಳು ಗ್ರಾಮಿಣ ಬದುಕಿನ ಚಿತ್ರಣವನ್ನೆ ಕೊಡುತ್ತವೆ. ನಗರದ ಬದುಕನ್ನು ಕೆಲವು ಕಥೆಗಳಿಗೆ ಅಯ್ಕೆ ಮಾಡಿಕೊಂಡಿದ್ದರೂ ಆ ಕಥೆಗಳಲ್ಲೂ ಗ್ರಾಮೀಣ ಪರಿಸರವನ್ನು ಪೂರಕವಾಗಿ ಬಳಸಿಕೊಂಡಿದ್ದಾರೆ.

ಮೊಗಳ್ಳಿಗಣೇಶ್ ರವರು ಅವರ ಪ್ರತಿಯೊಂದು ಕಥೆಗಳಲ್ಲೂ ಗ್ರಾಮೀಣ ಬದುಕಿನ ಬಗ್ಗೆ, ಗ್ರಾಮೀಣ ಭಾಗದಲ್ಲಿ ವಾಸಿಸುವ ಜನರ ಜೀವನ ಶೈಲಿ, ಅವರ ಬದುಕು, ಅಲ್ಲಿ ನಡೆಯುವ ಜಗಳ, ಹಬ್ಬದ ಆಚರಣೆ ಮತ್ತು ಸಂಭ್ರಮ, ಮುಗ್ಧ ಮನಸ್ಸಿನ ಮಕ್ಕಳು, ಕಲ್ಪನೆ, ನಂಬಿಕೆಯ ಸುತ್ತಾ ತಮ್ಮ ಬದುಕನ್ನು ಕಟ್ಟಿಕೊಂಡು ತಮ್ಮ ಜೀವನದಲ್ಲಿ ಸಂತೋಷವನ್ನು ಕಾಣುವ ಮನಸ್ಥಿತಿ, ಎಲ್ಲೋ ಒಂದು ಕಡೆ ಜೀವನವನ್ನು ನಿಯಂತ್ರಿಸಲು ತಾವೇ ಮಾಡಿ ಕೊಂಡಿರುವ ಕಟ್ಟು ಪಾಡುಗಳು, ಮೇಲ್ಜಾತಿಯವರು ಕೆಳಜಾತಿಯವರ ಮೇಲೆ ನಡೆಸುವ ದೌರ್ಜನ್ಯ, ದಬ್ಬಾಳಿಕೆ, ಜ್ಯಾತೀ ವೈಷಮ್ಯ, ಕ್ರೌರ್ಯ, ಪ್ರೀತಿ, ದ್ವೇಷ, ಸ್ವಾರ್ಥ, ರಾಜಕೀಯ, ನಾಗರೀಕತೆ, ಶಿಕ್ಷಣ ಗ್ರಾಮೀಣ ಬದುಕಿನ ಮೇಲೆ ಮಾಡಿರುವಂತಹ ಪರಿಣಾಮ, ಬದಲಾಗುತ್ತಿರುವ ಗ್ರಾಮಗಳು, ಅರ್ಥವನ್ನು ಕಳೆದು ಕೊಳ್ಳುತ್ತಿರುವ ನಂಬಿಕೆಗಳು, ದೂರವಾಗುತ್ತಿರುವ ಸಂಬಂಧಗಳು ಇವುಗಳೆಲ್ಲದರ ಸುತ್ತಾ ಕಥೆಯನ್ನು ಹೆಣೆದಿದ್ದಾರೆ, ತೋಪು, ನನ್ನಜ್ಜನಿಗೊಂದಾಸೆಯಿತ್ತು, ಕಾಳಗದ ಹುಂಜ, ಪ್ರಾಣಿಗಳು, ಪಟೇಲ, ಭೂಮಿ ಮುಂತಾದ ಕಥೆಗಳನ್ನು ಉದಾಹರಣೆಯಾಗಿ ಗುರುತಿಸಬಹುದು,

**ತೋಪು**

ಈ ಕಥೆಯು ಅನೇಕ ಸನ್ನಿವೇಶ, ಸಂದರ್ಭ, ಘಟನಾವಳಿಗಳಿಂದ ಕೂಡಿದ್ದು ಒಂದರೊಳಗೊಂದು ಬೆಸೆದುಕೊಂಡು ಪುಷ್ಟಿಕೊಡುತ್ತ ಕಥೆಯ ನಡಿಗೆ ಸಾಗುತ್ತದೆ.

ಒಂದು ಊರಿನ ಹಳ್ಳಿಯ ಆಗು ಹೋಗುಗಳು ಸಾಮಾಜಿಕ, ಧಾರ್ಮಿಕ, ರಾಜಕೀಯ ಕ್ಷೇತ್ರಗಳು ಹಾಗು ಭಾವನಾತ್ಮಕ ಸಂಬಂಧಗಳು, ಸಂವೇದನೆಗಳು ಪಾತ್ರಗಳ ಮೂಲಕ ಬಿತ್ತರಗೊಂಡಿದೆ. ಗ್ರಾಮೀಣ ಪರಿಸರದ ಚಿಂತನೆಗಳಲ್ಲಿ ಆರೋಗ್ಯಕರ ಮನಸ್ಥಿತಿ, ನಗರಕ್ಕೆ ಪರಿವರ್ತಿತಗೊಳ್ಳುವಂತಹ ಸಂದರ್ಭದಲ್ಲಿ ಮತ್ತು ರಾಜಕೀಯತೆ ನುಸುಳಿ ಅನೇಕ ಸಮಸ್ಯೆಗಳಿಗೆ ದಾರಿಮಾಡಿಕೊಡುವುದು ಇವೆಲ್ಲವನು ತೆರೆದಿಡುತ್ತಾ ಹೋಗುತ್ತಾರೆ.

ಈ ತೋಪು ಕಥೆಯು ಒಂದು ಗ್ರಾಮೀಣ ಪ್ರದೇಶದ ಸಂಸ್ಕೃತಿಯ ಕಥಾನಕ ಎಂದು ಹೇಳಬಹುದು. ಒಂದು ಪರಿಸರದ ಸುತ್ತ ನಡೆಯುವ ಕಥೆ. ಇಲ್ಲಿ ಪರಿಸರವೆಂದರೆ ನಿಸರ್ಗ, ಹಸಿರು, ವನಸಂಪತ್ತು, ಮರಗಳ ಸಂಪತ್ತು, ಜೀವಸಂಕುಲಗಳ ಸಂಪತ್ತು. ಇವುಗಳು ಬೆಳೆಯಲು, ಬೆಳೆಸಲು ಎಷ್ಟೋ ವರ್ಷಗಳು ಬೇಕು. ಒಂದೊಂದು ಮರವು ಒಂದೊಂದು ಜೀವದ ಆತ್ಮ, ಉಸಿರು, ಜೀವ ಕಂಡ ಬದುಕಿನ ಕಥೆಯನ್ನು ಹೇಳುವ ನೆನಪು ಮಾಡಿಕೊಳ್ಳುವಂತ ಮಹತ್ವ ಪೂರ್ಣವಾದವು. ಮರಗಳಿಗೂ ಒಂದು ಅಸ್ತಿತ್ವವಿದೆ ಎಂಬುದನ್ನು ಗುರುತಿಸಿದ, ವಂಶವಾಹಿನಿಗಳು ತಮ್ಮ ವಂಶಿಕರು ಮರವಾಗಿ ಹುಟ್ಟಿ ಇಲ್ಲಿ ಬೆಳೆದು ಬೆಳೆಯುವವರಿಗೆ ಆಶೀರ್ವಾದ ನೀಡುವಂತಹ ಭಾವನಾತ್ಮಕ ಸಂಬಂಧ ಬೆಳೆಸಿಕೊಂಡಿದ್ದಾರೆ. ಉದಾಹರಣೆಗೆ ಅಮ್ಮನ ಸಂಪಿಗೆಮರ ಪೂಜ್ಯತೆಯನ್ನು ಪಡೆದುಕೊಂಡಿದ್ದು. ಅನೇಕ ವರ್ಷಗಳ ನಂತರ ನೋಡಲಾಗಿ ಅದು ಬದಲಾಗಿದ್ದು, ಅಜ್ಜಿಯ ಬಿಲ್ವಪತ್ರಮರ ಹಸಿರಾಗಿಯೆ ಉಳಿದದ್ದು ತಾತನ ಮರವು ಕತ್ತಿಗೆ ಗುರಿಯಾಗಿ ತುಂಡು ತುಂಡಾಗಿ ಲಾರಿಯಲ್ಲಿ ತುಂಬಿ ಸಾಗುತ್ತಿದದ್ದು ಹೀಗೆ ಹಿರಿಯರ ನೆನಪು 'ಜೀವಗಾಡ್' ಪ್ರದೇಶವು ಗೌಡನ ದೌರ್ಜನ್ಯಕ್ಕೆ ಸಿಕ್ಕಿ ನಾಶವಾದದ್ದು, ಮನಸ್ಸಿಗೆ ಖೇದವುಂಟಾದದ್ದು, ಬಾಲ್ಯದ ಅನುಭವಗಳು ಸ್ಮೃತಿಪಟಲದಲ್ಲಿ ದಾಖಲು ಆಗಿದ್ದು, ಅದು ಒಂದೊಂದಾಗಿ ಹಂತ ಹಂತವಾಗಿ ಚಿತ್ರಿತಗೊಂಡಿದೆ, ಗೌಡನ ಅಹಂಕಾರ, ದೌರ್ಜನ್ಯ, ರಾಜಕೀಯತೆಯ ಬೆಂಬಲ,

ವರ್ಣ ವರ್ಗಗಳ ಘರ್ಷಣೆ, ಬಲಿಷ್ಠರು ದುರ್ಬಲರನ್ನು ಹೇಗೆ ತುಳಿಯಬಲ್ಲರು ಎಂಬುದು, ತೋಪು ಸರ್ವನಾಶವಾದ ಬಗೆಯನ್ನು ಉದಾಹರಣೆಯೊಂದಿಗೆ ನೋಡಬಹುದು.

**ಪಟೇಲ**

ಈ ಕಥೆಯು ಕಬಡ್ಡಿ ಆಟದ ಸುತ್ತಾ ಗ್ರಾಮೀಣ ಜನರ ಮನಸ್ಥಿತಿ ಬಿಚ್ಚಿಕೊಳ್ಳುತ್ತಾ ಹೊಗುತ್ತದೆ. ಶಾಲೆಯ ಹೆಡ್‌ಮಾಸ್ತರ್ ಜ್ಯಾತಿಪದ್ಧತಿಯ ವಿರೋದಿಯಾಗಿ ಕಂಡು ಬರುತ್ತಾರೆ. ದಲಿತರಿಗೆ ತಮ್ಮ ಬದುಕಿನ ಬಗ್ಗೆ ಅರಿವನ್ನು ಹುಟ್ಟಿಸುವ ವ್ಯಕ್ತಿಯಾಗಿ ಕಂಡು ಬರುತ್ತಾರೆ. ಆಟದಲ್ಲಿ ಬರುವ ಕುಂಟ ಇಡೀ ದಲಿತ ಜನಾಂಗದ ಪ್ರತಿನಿಧಿಯಾಗಿ ಕಂಡು ಬರುತ್ತಾನೆ. ದಲಿತರ ಬದುಕು ಕುಂಟನ ಆಸೆ, ಎಲ್ಲೊ ಒಂದು ರೀತಿಯಲ್ಲಿ ಯಾವುದೇ ಸುಖ ಸಂತೋಷ ನೆಮ್ಮದಿಗಳಿಲ್ಲದ ಬದುಕಾಗಿದ್ದು, ಕುಂಟನ ವೈಕಲ್ಯ ದೇಹದ್ದಾಗಿದ್ದರೆ ದಲಿತ ಜನಾಂಗದ ವೈಕಲ್ಯ ಮನಸ್ಸಿಗೆ ಸಂಬಂಧಿಸಿದ್ದಾಗಿದೆ. ಕುಂಟ ತಾನು ಶಾಲೆಗೆ ಹೋಗಿ ಓದಿ ಕೆಲಸಕ್ಕೆ ಸೇರಬೇಕೆಂಬ ಅವನ ಆಸೆ ಕನಸುಗಳು ದಲಿತರು ತಮ್ಮ ಜೀವನವನ್ನು ಉತ್ತಮ ಪಡಿಸಿಕೊಳ್ಳಬೇಕೆಂಬ ಕನಸುಗಳನ್ನು ಸೂಚಿಸುತ್ತವೆ. ಈ ಕಥೆಯಲ್ಲಿ ಬರುವಂತಹ ಪಟೇಲ ಮೇಲ್ವರ್ಗದವರ ಪ್ರತಿನಿಧಿಯಾಗಿದ್ದು ಅವನು ಕಥೆಯಲ್ಲಿ ನಿರೂಪಕನಿಗೆ ಮೆತ್ತುವ ಅಮೇಧ್ಯ ಅವನ ಮನಸ್ಥಿತಿಯ ದ್ಯೋತಕವಾಗಿ ಕಂಡು ಬರುತ್ತದೆ. ಅಮೇಧ್ಯದ ಹಾಗೇ ಅವನ ಮನಸ್ಸು ಹೇಸಿಗೆಯಾಗಿತ್ತು. ಕಬಡ್ಡಿ ಆಟದಲ್ಲಿ ಎದುರಾಗುವ ಹಳ್ಳಿ ಹುಡುಗರು ಮತ್ತು ನಗರ ಹುಡುಗರು ಹಳ್ಳಿ ಮತ್ತು ನಗರಗಳು ಎದುರಾಗಿ ಪರಸ್ಪರ ತಮ್ಮ ಉಳಿವಿಗಾಗಿ ಹೋರಾಟ ಮಾಡುತ್ತಿರುವಂತೆ ಕಂಡು ಬರುತ್ತದೆ. ಹಳ್ಳಿಯವರ ನಂಬಿಕೆಗಳು, ಕನಸುಗಳು ನಾಗರೀಕತೆಯ ಜೊತೆ ಬಡಿದಾಡುವುದನ್ನು, ಹಳ್ಳಿಯ ಹುಡುಗರು ಗೆಲ್ಲುವುದರ ಮೂಲಕ ಗ್ರಾಮಗಳು ಎಂದಿಗೂ ತಮ್ಮ ಅಸ್ತಿತ್ವವನ್ನು ಕಳೆದು ಕೊಳ್ಳದೆ ಹಾಗೆಯೇ ಉಳಿಯುತ್ತವೆ ಎಂದು ಬೇಕಾದರೆ ಹೇಳಬಹುದು.

**ಮಿಂಚುಳ**

ಈ ಕಥೆಯು ಮೇಲ್ವರ್ಗದವರ ದೌರ್ಜನ್ಯವನ್ನು ಹೇಳುತ್ತದೆ. ಕೆರೆಯ ಸಮೀಪದಲ್ಲಿ ಕಾಲ ಕಳೆದು ಅಲ್ಲೇ ಸಂತೋಷವನ್ನು ಕಾಣುತ್ತಿದ್ದ ಹುಡುಗರಲ್ಲಿ ಒಂದು ಹುಡುಗನನ್ನು ಕೊಲ್ಲುವುದರ ಮೂಲಕ ಅವರ ಸಂತೋಷವನ್ನೆ ಕಿತ್ತು ಕೊಂಡದ್ದನ್ನು ಗುರುತಿಸಬಹುದು. ಈ ಕಥೆಯಲ್ಲಿ ಜನಪದರ ನಂಬಿಕೆಯನ್ನು ಗುರುತಿಸಬಹುದು. ಬಿದಿ ಬದಿಯಲ್ಲಿ ಸತ್ತಂತ

ಮಕ್ಕಳು ಮಿಂಚುಳಗಳಾಗಿ ಹುಟ್ಟಿ ಬರುತ್ತಾರೆ ಎಂಬುದೇ ಆ ನಂಬಿಕೆ. ಮಾದಪ್ಪನ ಸಾಲುಗಳನ್ನು ಹಾಡಿ ಸ್ಪರ್ಧೆಯಲ್ಲಿ ಗೆದ್ದಂತಹ ಹುಡುಗರಲ್ಲಿ ಸ್ಪರ್ಧೆಯ ಗೆಲುವಿಗೆ ಕಾರಣವಾಗಿದ್ದಂತಹ ಹುಡುಗನನ್ನು ಬಂದೂಕು ದಾರಿಯಾದಂತಹ ವ್ಯಕ್ತಿ ಕೊಲ್ಲುತ್ತಾನೆ. ದಲಿತರು ಮೇಲೇಳಲು ಆಗದಂತೆ ಮೇಲ್ವರ್ಗದವರು ಸದಾ ಪ್ರಯತ್ನಿಸುತ್ತಲೇ ಇರುತ್ತಾರೆ ಎಂಬುದನ್ನು ಇಲ್ಲಿ ನಾವು ಗುರುತಿಸಬಹುದು. ಬಂದೂಕುದಾರಿ ತಾನು ಕೊಂದ ಹುಡುಗನಿಗೆ ಹಣವನ್ನು ಅದಕ್ಕೆ ಪ್ರತಿಯಾಗಿ ಕೊಟ್ಟಾಗ ಅದನ್ನು ತಿರಸ್ಕರಿಸಿ ನನ್ನ ಮಗ ಜೀವಂತವಾಗಿದ್ದಾನೆ ಅವನನ್ನು ಕೊಲ್ಲಲು ಸಾಧ್ಯವಿಲ್ಲ ಎಂದು ಕಿರುಚಿ ಹೇಳುವುದು ದಲಿತರ ಕನಸು ಎಂದಿಗೂ ಜೀವಂತವಾಗಿದ್ದು ಅವುಗಳನ್ನು ನಾಶಮಾಡಲು ಯಾರಿಂದಲೂ ಸಾಧ್ಯವಿಲ್ಲ ಎಂದು ಹೇಳಬಹುದು.

**ಪ್ರಾಣಿಗಳು**

ಈ ಕಥೆಯಲ್ಲಿ ಹುಡುಗರು ಕತ್ತೆಗೆ ಟಿನ್ ಕಟ್ಟಿ ಬಿಟ್ಟಾಗ ಅವು ಆಕಸ್ಮಿಕವಾಗಿ ಗೌಡರು ಬರುತ್ತಿದ್ದ ದಾರಿಗೆ ನುಗ್ಗಿ ಅವರು ಬರುತ್ತಿದ್ದ ಸೈಕಲ್ ಅವುಗಳಿಗೆ ಡಿಕ್ಕಿ ಹೊಡೆದು ತಿಪ್ಪೆಯ ಮೇಲೆ ಬಿದ್ದ ಸಂದರ್ಭದ ಮೂಲಕ ಒಂದು ಕೇರಿಯ ಜನರ ಮನಸ್ಥಿತಿಯನ್ನು ಬಿಚ್ಚಿಡುತ್ತಾ ಹೋಗುತ್ತದೆ. ಗೌಡರು ತಮ್ಮ ಈ ಸಮಸ್ಯೆಗೆ ಕತ್ತೆಗಳು ಮಾತ್ರ ಕಾರಣವಲ್ಲದೆ ಇಡೀ ಕೇರಿಯ ಜನರೇ ಕಾರಣ ಎಂದು ಸಿಟ್ಟುಗೊಂಡು ಅವರ ಮೇಲೆ ತಮ್ಮಿಂದಾಗ ಬಹುದಾದ ದಂಡಗಳನ್ನು ವಿಧಿಸಲು ಪ್ರಾರಂಭಿಸುತ್ತಾರೆ.

ಎಲ್ಲೂ ಒಂದು ಕಡೆ ಈ ಸಮಸ್ಯೆಗೆ ತಾವು ಕಾರಣವಾಗಿದ್ದರೂ ಅದರಿಂದ ತಪ್ಪಿಸಿಕೊಳ್ಳುವ ಸಲುವಾಗಿ ಒಬ್ಬರು ಇನ್ನೊಬ್ಬರ ಕಡೆಗೆ ದೂರುತ್ತಾರೆ. ನಾಯಿತಲೆ ಕಾಳಣ್ಣ–ಅಗಸನ ಮೇಲೆ, ಹುಡುಗರು ದೊಂಬನ ಮೇಲೆ ತಪ್ಪು ಹೊರಿಸಿದ್ದನ್ನು ಗಮನಿಸಬಹುದು. ಗುಂಡೇಗೌಡರು ತಮ್ಮ ಈ ಪರಿಸ್ಥಿತಿಗೆ ರಾಜಕೀಯ ಬಣ್ಣ ಬೆರೆಸಿ ಹೊಲೆಯರಿಗೆ ಹೊಡೆಯಲು ಹೇಳುತ್ತಾರೆ. ಗೌಡರು ಸೈಕಲಿನಿಂದ ಹೇಲು ಗುಂಡಿಗೆ ಬಿದ್ದ ಒಂದು ಸಮಸ್ಯೆ ಹಲವಾರು ಸಮಸ್ಯೆಗಳೊಂದಿಗೆ ಏಣೆದುಕೊಂಡು ಬೀದಿ ಜಗಳವಾಗುತ್ತದೆ. ಈ ಬೀದಿ ಜಗಳ ನಿಲ್ಲದೆ ಇಡೀ ಊರಿನ ದುರಂತವೆಂಬಂತೆ ಹಂಚಿಕೆಯಾಗಿಬಿಟ್ಟಿತು. ಯಾವುದಕ್ಕೆ ಕಿತ್ತಾಡ ಬೇಕೋ ಅದಕ್ಕೆ ಕೊಂಚವೂ ಕಿತ್ತಾಡದೆ ಇನ್ನಾವುದೋ ಘಟನೆಯ ಮೇಲೆ ತಮ್ಮ ಮತ್ಸರ, ಸಿಟ್ಟು, ಸಂಕಟಗಳನ್ನು ಪ್ರದರ್ಶಿಸುತ್ತಿದ್ದರು. ಹೀಗೆ ಈ ಕಥೆಯಲ್ಲಿ ಇಡೀ ಕೇರಿಯ ಜನರ ಮನಸ್ಥಿತಿಯನ್ನು ಚಿತ್ರಿಸುತ್ತಾ ಹೀಗುತ್ತಾರೆ.

## ೪.೧ ವಾಸ್ತವ ಜಗತ್ತಿನ ಚಲನೆ.

ಮೊಗಳ್ಳಿಯವರು ತಮ್ಮ ಕಥೆಗಳಲ್ಲಿ ವಾಸ್ತವತೆಯ ಬಗ್ಗೆ ಹೆಚ್ಚಾಗಿ ಹೇಳಿದ್ದಾರೆ. ಅವರ ಕಥೆಗಳಿಗೆ ಜಾನಪದ ಕಥೆಗಳೇ ಆಧಾರವಾಗಿದ್ದರೂ ಅಲ್ಲಿನ ಪಾತ್ರಗಳನ್ನು ಬದಲಾಯಿಸಿಕೊಳ್ಳುವುದರ ಮೂಲಕ ಅಧುನಿಕ ಕಾಲಕ್ಕೆ ಹೊಂದಿಕೆಯಾಗುವಂತೆ ರಚನೆ ಮಾಡಿದ್ದಾರೆ. ಎರಡೋ ಮೂರೋ ಕಥೆಗಳನ್ನೂ ಬಿಟ್ಟರೆ ಉಳಿದ ಎಲ್ಲಾ ಕಥೆಗಳು ವಾಸ್ತವ ಜಗತ್ತಿನ ಬದುಕಿನ ಪ್ರತೀಕದಂತಿವೆ. ಮೊಗಳ್ಳಿಯವರು ಕಲ್ಪನೆಗೆ ಹೆಚ್ಚು ಆಸ್ಪದವನ್ನು ಕೊಡುವುದಿಲ್ಲ. ಭೂಮಿ, ರೈಲುಜನ, ಸೂರ್ಯವತಿ ಮುಂತಾದ ಕೆಲವೊಂದು ಕಥೆಗಳನ್ನು ಹೊರತು ಪಡಿಸಿದರೆ ಉಳಿದೆಲ್ಲಾ ಕಥೆಗಳು ವಾಸ್ತವ ಜಗತ್ತಿಗೆ ತುಂಬಾ ಹತ್ತಿರದವಾಗಿವೆ.

ಪ್ರಸ್ತುತ ಜಗತ್ತಿನಲ್ಲಿ ನಡೆಯುತ್ತಿರುವ ಘಟನೆಗಳನ್ನೆ ತೆಗೆದು ಕೊಂಡು, ವಾಸ್ತವತೆಗೆ ಹೆಚ್ಚು ಪ್ರಾಮುಖ್ಯತೆಯನ್ನು ಕೊಟ್ಟು ತಮ್ಮ ಕಥೆಗಳನ್ನು ರಚಿಸಿದ್ದಾರೆ. ಅಲ್ಲಿ ಬರುವ ಪ್ರತಿಯೊಂದು ಘಟನೆಗಳು ಕಣ್ಣಿಗೆ ಕಟ್ಟಿದಂತೆ ಚಿತ್ರಿತವಾಗುತ್ತಾ ಹೋಗುತ್ತವೆ. ನೈಜ್ಯತೆಗೆ ಹೆಚ್ಚಿನ ಪ್ರಾಶಸ್ತ್ಯ ನೀಡಿರುವ ಮೊಗಳ್ಳಿಯವರು ಕಲ್ಪನೆಗೆ ಆಸ್ವದವನ್ನು ನೀಡದೆ ಘಟನೆಗಳನ್ನು ತಮ್ಮ ಕಥೆಯಲ್ಲಿ ಹೆಣೆದಿದ್ದಾರೆ. ಮನುಷ್ಯನ ಸ್ವಾರ್ಥ, ರಾಜಕೀಯ, ಅವನ ಕ್ರೌರ್ಯ, ನಾಗರೀಕತೆಯು ಉಂಟು ಮಾಡಿರುವ ಭೀತಿ, ಜಗಳ, ಸೇಡು ತೀರಿಸಿಕೊಳ್ಳಲು ಮಾಡುವ ಸಂಚು, ಲೈಂಗಿಕತೆಯ ತೃಪ್ತಿಗಾಗಿ ಮಾಡುವ ಸಂಚು, ತಂತ್ರಗಳು, ಹಬ್ಬದ ಸಂಭ್ರಮ, ಆಚರಣೆ, ಹೊಡೆದು ಹೋಗುತ್ತಿರುವ ಬಾಂಧವ್ಯಗಳ ಬಗ್ಗೆ ಚಿತ್ರಗಳನ್ನು ಕೊಡುವ ಸಂದರ್ಭದಲ್ಲಿ ವಸ್ತುಸ್ಥಿತಿಗೆ ಹೆಚ್ಚಿನ ಆದ್ಯತೆಗಳನ್ನು ಕೊಟ್ಟಿದ್ದಾರೆ. ಕೆಲವು ಕಥೆಗಳ ಹಿನ್ನೆಲೆಯಲ್ಲಿ ನಾವು ಅದನ್ನು ಗುರುತಿಸಬಹುದು.

**ಅತ್ತೆ**

ಅತ್ತೆ ಕಥೆಯು ಹೆಣ್ಣೊಬ್ಬಳು ತನ್ನ ಗಂಡನ ಮನೆಯಲ್ಲಿ ಬದುಕನ್ನು ಕಟ್ಟಿಕೊಳ್ಳಲು ಸಾಧ್ಯವಾಗದೆ ತನ್ನ ತವರಿನ ಆಶ್ರಯಕ್ಕೆ ಬಂದಾಗ ಅವಳ ಮೇಲೆ ನಡೆಯುವ ದೌರ್ಜನ್ಯವನ್ನು ಇದು ಕಟ್ಟಿ ಕೊಡುತ್ತಾ ಹೋಗುತ್ತದೆ. ಗಂಡನ ಮನೆ ಬಿಟ್ಟು ತವರು ಮನೆ ಸೇರುವ ಹೆಣ್ಣನ್ನು ಸಮಾಜ ಹೇಗೆ ಕಾಣುತ್ತದೆ, ಮನೆಯವರು ಅವಳೊಂದಿಗೆ ಹೇಗೆ ವರ್ತಿಸುತ್ತಾರೆ ಇದೆಲ್ಲವನ್ನು ಈ ಕಥೆಯ ಮೂಲಕ ಹೇಳುತ್ತಾ ಹೋಗುತ್ತಾರೆ.

ಗಂಡನ ಮನೆಬಿಟ್ಟು ಬಂದು ಅವಳು ಬೇರೆಯವರ ಜೊತೆ ಅಕ್ರಮ ಸಂಬಂಧ ಬೆಳಸಬಹುದು ಎಂಬ ಕಾರಣಕ್ಕೆ ಅವಳನ್ನು ಕಾಯುವುದಕ್ಕಾಗಿ ಒಬ್ಬ ಹುಡುಗನನ್ನು ನೇಮಕ ಮಾಡುತ್ತಾರೆ. ಆದರೆ ವಯಸ್ಸಿನ ಪ್ರಭಾವದಿಂದಾಗಿ ಆ ಹುಡುಗನೇ ಅವಳ ಕಡೆಗೆ ಆಕರ್ಷಿತನಾದದ್ದನ್ನು ನಾವು ಇಲ್ಲಿ ಗುರುತಿಸಬಹುದು. ಊರಿನ ಇತರ ಹೆಂಗಸರು ಕೂಡ ಅವಳನ್ನು ಕೀಳಾಗಿ ಕಾಣುತ್ತಿದ್ದರು. ಊರಿನ ಬಜಾರಿ ಹೆಂಗಸರು ಕೂಡಿ ಛೀಮಾರಿ ಹಾಕಿ 'ಗಂಡನ್ ಬಿಟ್ ಬಂದಲ್ಲಾ ಮಿಂಡನ್ ಎಲ್ ಕಳ್ಸಿದ್ದಿಯಮ್ಮೀ' ಎಂದು ಹಂಗಿಸುತ್ತಿದ್ದರು ಮನೆಯ ಗಂಡಸರು ಮನಸೋ ಇಚ್ಚೆ ಉಗಿದು ಹರಿಶಿಣ ಮೆತ್ತಿಕೊಂಡ ಮುತ್ತೈದೆಯರು ಬುದ್ಧಿ ಹೇಳಿದರು ಒಟ್ಟಿನಲ್ಲಿ ತವರಿಗೆ ಬಂದ ಅವಳನ್ನು ಗಂಡನ ಮನೆಗೆ ಕಳುಹಿಸಲು ಪ್ರಯತ್ನ ಮಾಡುತ್ತಿದ್ದರು. ನಾನಾ ಬಗೆಯ ಚಿತ್ರ ಹಿಂಸೆಗಳನ್ನು ಕೊಡುತ್ತಿದ್ದರು ಮನೆಯ ಯಜಮಾನ ಕೊಡುತ್ತಿದ್ದ ಹಿಂಸೆಗಳಲ್ಲಿ ಮನುಷ್ಯನ ಕ್ರೌರ್ಯವನ್ನು ಗುರುತಿಸಬಹುದು, ಕೊನೆಗೆ ತವರಿನಲ್ಲಿಯೂ ನೆಲೆ ಕಾಣಲು ಸಾಧ್ಯವಾಗದೆ ಅಸಹಾಯಕಳಾಗಿ ಮನೆ ಬಿಟ್ಟು ಹೋದಂತ ಹೆಂಗಸಿನ ಪರಿಸ್ಥಿತಿಯನ್ನು ಈ ಕಥೆ ಹೇಳುತ್ತದೆ.

**ಬಾಡೂಟ**



ಇದೊಂದು ಸಾಂಸಾರಿಕ ಕಥೆ ಪುರುಷನ ದೌರ್ಜನ್ಯ, ಅಹಂಕಾರ, ಸವತಿ ಮಕ್ಕಳೊಂದಿಗೆ ಮನಸ್ತಾಪ, ನೆನ್ನೆ ಇಂದುಗಳ ನಡುವೆ ನಡೆಯುವ ಘಟನೆ ಈ ಕಥೆಯ ವಸ್ತುವಾಗಿದೆ.

ಹಿಂದಿನ ದಿನ ಬಾಡೂಟದ ತಯಾರಿಕೆಯಲ್ಲಿದ್ದ ಸಂಸಾರ ಸಂತೋಷ, ಸಂಭ್ರಮದಿಂದ ಕೂಡಿತ್ತು. ಉಳಿದ ಸಂಬಾರನ್ನು ಮಕ್ಕಳಿಗೆ ರೊಟ್ಟಿಯ ಜೊತೆಯಲ್ಲಿ ಕೊಟ್ಟು ಪೇಟೆಗೆ ತಾತನ ಜೊತೆಯಲ್ಲಿ ಹೋಗಿದ್ದ ರಾಜು ಇನ್ನೂ ಬಾರದೆ ಇದ್ದದ್ದನ್ನು ಕಂಡು ತಾನೇ ಉಂಡದ್ದು ರಾಜನ ಅಕ್ಕ ತಮ್ಮನಿಗೆ ಸಾರು ಇಲ್ಲದ್ದು ಕಂಡು ಹೀನಾಮಾನವಾಗಿ ತನ್ನ ಮಲತಾಯಿಯನ್ನು ಬೈದದ್ದು ಗಂಡ ಬಂದು ಮಕ್ಕಳಿಗೆ ಮೋಸ ಮಾಡಿದ ಹೆಣ್ಣು ಎಂದು ಹಿಗ್ಗಾಮುಗ್ಗಾ ಚಚ್ಚಿದ್ದು ಈ ನೋವು ಸಂಕಟ, ಅವಮಾನ, ಯಾತನೆ, ಅನುಭವಿಸಿದ್ದು, ಬದುಕಿದ್ದು ಏನು ಮಾಡ ಬೇಕೆಂದು ಕೋಪಗೊಂಡ ಮನಸ್ಸು ಆತ್ಮಹತ್ಯೆಗೆ ಶರಣಾದದ್ದು, ಅಷ್ಟೇ ಅಲ್ಲದೆ ಅಂತ್ಯಗೊಂಡದ್ದು ಬಟ್ಟೆತೊಳೆಯಲು ಹೋದ ಕೆಲವು ಮಂದಿ ಹೆಂಗೆಳೆಯರು ಮನೆಗೆ ಬರುವಷ್ಟರಲ್ಲಿ ದುಃಖದ ವಾತಾವರಣ ಸಾವಿನ ಮನೆಯು ಆಗಿತ್ತು. ಈ ಘಟನೆಯಲ್ಲಿ ಸಾವು ಸಂಭವಿಸಲು ಸ್ತ್ರೀಯ ಸ್ವಾಭಿಮಾನ ಚಂಚಲ, ದುಡುಕ ಬುದ್ಧಿ,

ಅತಿಯಾದ ವಾತ್ಸಲ್ಯ ಪುರುಷನಾದವನ ಅಹಂಕಾರಗಳೇ ಕಾರಣ. ಇವುಗಳನ್ನು ಕಟ್ಟಿಕೊಡುವಾಗ ಮೊಗಳ್ಳಿ ಗಣೇಶ್‌ರವರು ವಾಸ್ತವತೆಗೆ ಹೆಚ್ಚಿನ ಪ್ರಮುಖ್ಯತೆಯನ್ನು ನೀಡಿದ್ದಾರೆ.

### ೪.೨ ನಂಬಿಕೆ ಮತ್ತು ನಡವಳಿಕೆ

ಮೊಗಳ್ಳಿಯವರು ತಮ್ಮ ಕಥೆಗಳಲ್ಲಿ ಜನಪದೀಯರ ನಂಬಿಕೆಗಳನ್ನು ಬಳಕೆ ಮಾಡಿಕೊಂಡಿದ್ದಾರೆ. ಆ ನಂಬಿಕೆಗಳ ಸುತ್ತಲೇ ಕಥೆ ತನ್ನ ಒಡಲನ್ನು ಬಿಚ್ಚಿಕೊಳ್ಳುತ್ತಾ ಹೋಗುತ್ತದೆ. ಕೆಲವೊಂದು ಸಲ ನಂಬಿಕೆಗಳೇ ಪಾತ್ರಗಳ ನಡವಳಿಕೆಯ ಮೇಲೆ ಪ್ರಭಾವವನ್ನು ಬೀರುತ್ತವೆ.

**ಅಲ್ಲಿ ಆ ಅಳು ಈಗಲೂ**

ಒಂದು ಮಗುವಿನ ಅಳುವಿನ ಸುತ್ತಾ ಈ ಕಥೆ ತೆರೆದು ಕೋಳ್ಳುತ್ತಾ ಹೋಗುತ್ತದೆ. ಈ ಕಥೆಯಲ್ಲಿ ದೇವರು ಮತ್ತು ದೆವ್ವ ಮನುಷ್ಯನ ಮೈ ಮೇಲೆ ಬರುತ್ತದೆ ಎಂಬ ನಂಬಿಕೆಯನ್ನು ಬಳಸಿಕೊಂಡು ಮಗುವಿನ ದೃಷ್ಟಿಕೊನದ ಮೂಲಕ ಚಿತ್ರಿಸುತ್ತಾ ಹೋಗುತ್ತಾರೆ. ಮಗುವಿನ ಅಳುವಿನ ಮೂಲಕ ಪ್ರಾರಂಭವಾದ ಕಥೆ ಮಗುವಿನ ಅಳು ನಿಲ್ಲುವುದರ ಮೂಲಕ (ಸಾವಿನ) ಮುಕ್ತಾಯವಾಗುತ್ತದೆ.

ಕಾರಣವಿಲ್ಲದೆ ಅಳುವುದಕ್ಕೆ ಪ್ರಾರಂಭಿಸಿದ ಹೂವ ಅಳುವುದನ್ನು ನಿಲ್ಲಿಸದೆ ಮುಂದುವರೆಸಿ ಮನೆಯ ಎಲ್ಲರ ಗಮನವನ್ನು ತನ್ನ ಕಡೆಗೆ ಸೆಳೆದುಕೊಳ್ಳುತ್ತಾನೆ. ಯಾರು ಏನೇ ಕೇಳಿದರು ಅಳುವನ್ನು ನಿಲ್ಲಿಸದೆ ಹೂವ ಮಧ್ಯಾಹ್ನದವರೆಗೂ ಅಳುವನ್ನು ಮುಂದುವರೆಸಿದ.

ಎಂದೋ ಒಂದು ದಿನ ದೊಡ್ಡವರ ನಂಬಿಕೆಗಳನ್ನು ಬಳಸಿಕೊಂಡು ತನ್ನ ಮೇಲೆ ದೇವರು ಬಂದಿದೆ ಎಂದು ನಂಬಿಸಿ ಬಿಟ್ಟಿದ್ದ ಅದನ್ನೆ ಆಧಾರವಾಗಿಟ್ಟು ಕೊಂಡು ಅವತ್ತು ಕೂಡ ಅವನ ಮೇಲೆ ದೇವರು ಬಂದಿರ ಬೇಕೆಂದು ಎಂದು ತಿಳಿದು ಅವನನ್ನು ಪರಿಪರಿಯಾಗಿ ಬೇಡುತ್ತಾರೆ. ಆದರೆ ಅದಕ್ಕೆ ಹೂವ ಉತ್ತರವನ್ನು ಕೊಡುವುದಿಲ್ಲ. ಅಷ್ಟರೊಳಗೆ ಅಲ್ಲಿಗೆ ಬಂದ ಅವನ ಅಪ್ಪನನ್ನು ಕಂಡು ಹೂವ ಏನೇನೋ ಹೇಳುತ್ತಾನೆ ಅದನ್ನು ತಪ್ಪಾಗಿ ತಿಳುದು ಅವರ ಅಪ್ಪ ಇದು ದೆವ್ವದ ಕಾಟ ಎಂದು ಹೇಳಿ ದೆವ್ವ ಬಿಡಿಸುತ್ತಾನೆ ಎಂದು ಬನ್ನಿ ಮರದ ಹತ್ತಿರಕ್ಕೆ ಕರೆದು ಕೊಂಡು ಹೋಗಿ ಅವನ

ಮುಡಿಯನ್ನು ನುಲಿದಿದ್ದವನು ಪಟಕ್ಕೆಂದು ಎತ್ತಿ ಕುಕ್ಕರಿಸಿ ಹೂವನ ಸಮೇತ ಎಳೆದಾಡಿ ಜಡಿದುತ್ತಿದ್ದಂತೆಯೇ ಹೂವನ ಸದ್ದಡಗಿತ್ತು. ಹೀಗೆ ಅವರ ನಂಬಿಕೆ ಒಂದು ಮುಗ್ಧ ಮಗುವಿನ ಪ್ರಾಣ ಹೋಗಲು ಹೇಗೆ ಕಾರಣವಾಯಿತು ಎಂಬುದನ್ನು ಬಿಡಿಸುತ್ತಾ ಹೋಗುತ್ತಾರೆ.

ಇದೇ ರೀತಿಯಲ್ಲಿ ತೋಪು ಮತ್ತು ತಣಿಗೆ ಕಥೆಗಳು ಇವೆ. ತಣಿಗೆ ಕಥೆಯಲ್ಲಿ ತಣಿಗೆ ಒಂದು ದೈವಿಕ ವಸ್ತುವಾಗಿ ಕಂಡು ಬರುತ್ತದೆ. ಜನ ಅದನ್ನು ವಿಶಿಷ್ಟವಾದ ಶಕ್ತಿಯುಳ್ಳ ವಸ್ತು ಎಂದೇ ನಂಬಿರುತ್ತಾರೆ. ಈ ತಣಿಗೆಯ ಸುತ್ತಾ ಕಥೆ ಬಿಚ್ಚಿ ಕೊಳ್ಳುತ್ತಾ ಹೊಗುತ್ತದೆ.

ತಣಿಗೆಯ ವಿಶೇಷತೆಯನ್ನು ಹೇಳುವುದರ ಜೊತೆಜೊತೆಗೆ ಒಂದು ಕುಟುಂಬದಲ್ಲಿ ಆದ ಬದಲಾವಣೆಗಳನ್ನು ಹೇಳುತ್ತಾ ಹೋಗುತ್ತಾರೆ. ಆಧುನಿಕತೆಯ ಪ್ರಭಾವ, ಸಂಬಂಧಗಳಲ್ಲಿ ಉಂಟಾದ ಒಡಕು, ನಾಗರಿಕತೆಯ ಪ್ರವೇಶ, ಬಾಲ್ಯದ ನೆನಪುಗಳು, ಸಂಸ್ಕೃತೀಕರಣ ಅರ್ಥ ಕಳೆದುಕೊಂಡ ನಂಬಿಕೆಗಳು ಇವುಗಳನ್ನೆಲ್ಲಾ ಚಿತ್ರಿಸುತ್ತಾ ಹೋಗುತ್ತಾರೆ.

ತೋಪು ಕತೆಯು ಕೂಡ ಇದೇ ರೀತಿಯ ಕಥೆ. ಪ್ರತಿಯೊಂದು ಮರವು ಒಂದೊಂದು ಜೀವ. ಆ ಮರಗಳಲ್ಲಿ ನಮ್ಮ ಪೂರ್ವಿಕರು ವಾಸ ಮಾಡುತ್ತಾರೆಂಬ ನಂಬಿಕೆಯ ಮೂಲಕ ಬಿಚ್ಚಿಕೊಳ್ಳುತ್ತಾ ಹೋಗುತ್ತದೆ. ನಗರ ಜೀವನ, ಆಧುನಿಕತೆ, ರಾಜಕೀಯ, ನಂಬಿಕೆಯಲ್ಲಿ ಆದಂತಹ ಬದಲಾವಣೆ, ಮುಂದೆ ಒಳ್ಳೆಯದಾಗುತ್ತದೆ ಎಂಬ ಆಶಾಭಾವನೆ ಇವುಗಳ ಮೂಲಕ ಒಂದು ಸಂಸ್ಕೃತಿಯ ನಂಬಿಕೆ ಬಿಚ್ಚಿಕೊಳ್ಳುತ್ತಾ ಹೋಗುತ್ತದೆ.

" 'ತೋಪು' ಕಥೆಯಲ್ಲಿ ಕಥೆಗಾರ ಕಾಲದೊಂದಿಗೆ ಮೆಲಕುಹಾಕುತ್ತಾ, ಹಳೆಯ ನೆನಪುಗಳ ನಂಬಿಕೆಗಳ, ಆಚರಣೆಗಳ, ಆಶಯಗಳನ್ನು ಉಳಿಸಿಕೊಳ್ಳುವ ಹಂಬಲವಾಗಿದೆ. ಅವುಗಳನ್ನು ದಲಿತರು ವಾಸ್ತವದಲ್ಲಿ ಅಳವಡಿಸಿಕೊಳ್ಳಬೇಕೆಂಬ ತುಡಿತವಿದೆ. ಹಳೆಯಕಾಲದ ಜೀವನ ಪ್ರೀತಿ ಕಥೆಗೆ ಮುಖ್ಯವಾಗಿದೆ. ಅಜ್ಜಿ ಹೇಳುವ 'ಬಿಲ್ವಪತ್ರೆ ಮರದ ಕಥೆ', ತಾತ ಹೇಳುತ್ತಿದ್ದ 'ಜೀವನ್ ಗಾಡ್'ಬಗ್ಗೆ ಅಂದರೆ ನಾವು ಇವತ್ತು ಹೇಳುತ್ತಿರುವ ಸ್ಮಶಾನಕ್ಕೆ ಪೂರ್ವಿಕರು ಅದನ್ನು 'ಜೀವನ್‌ಗಾಡ್' ಎಂಬ ಜೀವನ ಮೌಲ್ಯಗಳ ನಂಬಿಕೆಗಳಲ್ಲಿ ಅದರ ಬಗ್ಗೆ ಸಂಬಂಧ ಇಟ್ಟುಕೊಂಡಿರುವ ಸಂಗತಿಯನ್ನು ಹೇಳುತ್ತಾರೆ. ದಲಿತರ ಜನಪರ ಕಥೆಗಳ

ಆಶಯಗಳನ್ನು ದಲಿತರ ವಾಸ್ತವಬದುಕಿನ ಕಥೆಗಳಲ್ಲಿ ಅಳವಡಿಸಿಕೊಳ್ಳುವಂತಹ ತಂತ್ರಗಾರಿಕೆಯನ್ನು ಮೊಗಳ್ಳಿಯವರು ಕಥೆಯಲ್ಲಿ ಅಭಿವ್ಯಕ್ತಿಸುತ್ತಾರೆ."( ಹೊನ್ನಯ್ಯ. ಸಿ. ಬಿ. : ಕನ್ನಡ ಸಣ್ಣಕತೆಗಳಲ್ಲಿ ದಲಿತ ಸಂಸ್ಕೃತಿ, ಪುಟ ೨೧೯)

### ೪.೩ ಹಬ್ಬಗಳು ಮತ್ತು ಆಚರಣೆ

ಮೊಗಳ್ಳಿಯವರು ತಮ್ಮ ಕಥೆಗಳಲ್ಲಿ ಹಬ್ಬಗಳು ಮತ್ತು ಅವುಗಳ ಆಚರಣೆಗಳನ್ನು ಬಳಸಿಕೊಂಡಿದ್ದಾರೆ. ಹಬ್ಬಗಳು ಮತ್ತು ಆಚರಣೆಗಳನ್ನು ಕಥೆಗಳಲ್ಲಿ ಹೇಳುವುದರ ಮೂಲಕ ಮನುಷ್ಯನ ಸ್ವಾರ್ಥ, ರಾಜಕೀಯ, ಸೇಡು ಮುಂತಾದವುಗಳನ್ನು ಕಟ್ಟಿ ಕೊಡುತ್ತಾ ಹೋಗುತ್ತಾರೆ ಕೊಂಡ ಮತ್ತು ಹಬ್ಬ ಕಥೆಗಳನ್ನು ಉದಾಹರಣೆಯಾಗಿ ನೋಡಬಹುದು.

ಗ್ರಾಮೀಣ ಜಗತ್ತಿನ ಸಾಂಸ್ಕೃತಿಕ ಎಲ್ಲೆಯನ್ನೆ ಬಿಚ್ಚಿ ಹರಡಿರುವುದು ವಿಶೇಷವಾಗಿದೆ. ಕೊಂಡ ಕಥೆಯಲ್ಲಿ ಊರಿನ ಮಾರಿದೇವತೆಯ ಹಬ್ಬದ ಕೊಂಡದ ಆಚರಣೆಯಲ್ಲಿ ಜನರ ಸ್ವಾರ್ಥ, ರಾಜಕೀಯ, ದ್ವೇಷ ಎಲ್ಲವನ್ನು ಬಿಚ್ಚಿಡುತ್ತಾ ಹೋಗುತ್ತಾರೆ. ದೇವರ ಮೇಲಿನ ಭಕ್ತಿಯಿಂದ ಆಚರಿಸುವ ಹಬ್ಬವನ್ನು ತಮ್ಮ ಸ್ವಾರ್ಥಕ್ಕೆ ಬಳಸಿಕೊಂಡು ದ್ವೇಷ ಸಾಧನೆಗಾಗಿ ಆತೊರೆಯುವ ವ್ಯಕ್ತಿಗಳನ್ನು ಈ ಕಥೆಯಲ್ಲಿ ನಾವು ಗುರುತಿಸಬಹುದು.

ಚಿಕ್ಕಣ್ಣನ ಜಗಳ ಗಂಟತನವನ್ನು ಕಂಡ ಊರಿನ ಹಿರಿಯರಾದ ರಂಗೇಗೌಡರ ತಿರಸ್ಕಾರ, ರಂಗೇಗೌಡರು ಊರಿನ ಎಲ್ಲಾ ಘಟನೆಗಳಿಗು ತನ್ನ ಗತಕಾಲದ ಲೆಕ್ಕಾಚಾರಗಳಿಂದ ತೂಗಿ ಎಲ್ಲವೂ ಹಾಳಾಗಿ ಹೋಯಿತೆಂದು ಸಂಕಟ ಪಡುತ್ತಿದ್ದದ್ದು, ರಂಗೇಗೌಡರ ಬಯಕೆ, ತನ್ನ ದ್ವೇಷ ಸಾಧನೆಗಾಗಿ ಅಸಹಾಯಕಳಾದ ಸಾವಿತ್ರಿಯ ಮೇಲೆ ನಡೆದ ಅತ್ಯಾಚಾರ , ಕೊಂಚೇಗೌಡರು ಮತ್ತು ರುದ್ರನಿಗೂ ಇದ್ದ ಪೈಪೋಟಿ ರುದ್ರ ಪೂಜರಿ ಪಟ್ಟವನ್ನು ಪಡೆದದ್ದು, ತನ್ನ ಚಾಣಾಕ್ಷಮತಿಯಿಂದ ಹೇಗೊ ದೇವಾಲಯಕ್ಕೆ ಬರುವ ಭಕ್ತರ ಇಂಗಿತವನ್ನು ತನ್ನ ತಂತ್ರಗಳಿಂದ ತಿಳಿದು ಕೊಂಡು ಬರುವ ಭಕ್ತರಿಗೆ ಮಂಕು ಬೂದಿ ಎರಚುತ್ತಿದ್ದದ್ದು, ಕೊನೆಗೆ ರುದ್ರನಿಂದಾಗಿ ಊರು ಒಡೆದು ಹೊದದ್ದು, ಊರಿನ ಮುಂದಾಳತ್ವವನ್ನು ವಹಿಸಿಕೊಳ್ಳ ಬೇಕೆಂಬ ರುದ್ರನ ಪ್ರಯತ್ನ, ಎರಡೂ ಕೇರಿಗಳವರೂ ಸಮಾನವಾಗಿ ತಮಟೆ ನಗಾರಿಗಳ ಗಸ್ತಿಮೇಳಾದಲ್ಲಿ ಮಹಾವೀರನಂತೆ ಬಡಿದು ಕುಣಿಯುವಂತೆ ಮಾಡುತ್ತಿದ್ದ ಕುಂಡಪ್ಪನ ತಮಟೆ ಕಲೆಗೆ ಗೌರವ ಕೊಟ್ಟಿದ್ದು, ಅಣ್ಣೇಗೌಡರು ಹೊಲೆಮಗ ಕುಂಡಪ್ಪನನ್ನು ಸೋಲಿಸಬೇಕೆಂದು ವಕ್ಕಲಿಗ ಜಾತಿಯ ತುಂಟ ಹುಡುಗರಿಗೆ ತಮಟೆ ಕಲಿಸಿ ಯುದ್ಧಕ್ಕೆ

ಕುಂಡಪ್ಪನ ಮೇಲೆ ಬಿಟ್ಟಂತೆ ಪಂದ್ಯ ಏರ್ಪಡಿಸಿ ಅವಮಾನಿತರಾಗಿ ಹೋಗಿದ್ದು, ಹುಡುಗಿಯರ ಕನಸು, ಹಬ್ಬದ ಸುಖದಲ್ಲಿ ತನಗೆ ಏಕಾಂತದ ಸುಖ ದಕ್ಕಲಿ ಎಂದು ಕನವರಿಸುತ್ತಿದ್ದ ಸಾಕಿ, ಹಬ್ಬಕ್ಕೆ ಕೊಂಡ ಉರಿಸುವ ಜವಬ್ದಾರಿ ಹೊತ್ತ ಚಿಕ್ಕಣ್ಣ, ಕೆಂಚೇಗೌಡರ ಮಂತ್ರಿಯಾಗುವ ಕನಸು, ಆ ಕನಸನ್ನು ಹೀಡೇರಿಸಿಕೊಳ್ಳಲು ಇರುವಂತಹ ಏಕೈಕ ವೈರಿ ಎಂದರೆ ರುದ್ರಣ್ಣ ಅವನನ್ನು ನಿವಾರಿಸುವ ಸಲುವಾಗಿ ಚಿಕ್ಕಣ್ಣ ಮತ್ತು ರುದ್ರಣ್ಣನ ನಡುವೆ ಇರುವಂತಹ ವೈರ್ಯವನ್ನು ತನ್ನ ಕುಯುಕ್ತಿಯಿಂದ ಹೆಚ್ಚಿಸಿ ಕಡಿದಾಡುವಷ್ಟು ಕ್ರೋಧರನ್ನಗಿಸಿದ್ದು, ಕುಂಡಪ್ಪನ ಪ್ರಾರ್ಥನೆ, ಕುರುಡನಾದ ತನಗೆ ಸಾಯುವ ಕೊನೆಯಲ್ಲಾದರೂ ಕಣ್ಣು ಕೊಟ್ಟು ಹಬ್ಬದ ಸಂಭ್ರಮವನ್ನು ಕೊನೆಯ ಬಾರಿ ನೋಡುವ ಅವಕಾಶವನ್ನು ದೇವರು ದಯ ಪಾಲಿಸಲಿ ಎಂಬ ಆಸೆ, ಕೆಂಚೇಗೌಡರ ತಂತ್ರದಿಂದಾಗಿ ಚಿಕ್ಕಣ್ಣ ರುದ್ರನಿಂದ ಹತನಾದದ್ದು, ಆದರೆ ಕೆಂಚೇಗೌಡರು, ಚಿಕ್ಕಣ್ಣನನ್ನು ಕೊಲ್ಲಬೇಕೆಂಬ ಸಂಚು ಹೀಡೇರದಿದ್ದದ್ದು ಎಲ್ಲಾ ಒಂದೊಂದಾಗಿ ತೆರೆದುಕೊಳ್ಳುತ್ತಾ ಹೋಗುತ್ತದೆ.

**ಹಬ್ಬ ಕಥೆ**

ದಲಿತ ಸಮುದಾಯದ ಸಮಾಜದ ಚಿತ್ರಣ, ಮಾರಿಹಬ್ಬ, ಅವರ ನಂಬಿಕೆ ಆಚರಣೆ ಉತ್ಸಾಹ ಸಂತೋಷಗಳು ಮತ್ರವಲ್ಲದೆ ಗ್ರಾಮಾಫೋನ್ ತಟ್ಟೆ – ಹಾಡು, ತಟ್ಟೆಗಳಿಂದ ಬಿತ್ತರಗೊಳ್ಳುತ್ತಿದ್ದ ಹಾಡುಗಳು, ಸಂಸ್ಕೃತೀಕರಣದ ಚಿತ್ರಣ – ಪರಂಪರೆಯ ಸಂಪ್ರದಾಯ, ಹಬ್ಬದ ಆಚರಣೆ ವೈಜ್ಞಾನಿಕ ಆವಿಷ್ಕರಣಗೊಂಡಿದ್ದ ಹಾಡು, ಇಲ್ಲಿ ಹಳೆಯದು ಮತ್ತು ಹೊಸತು ಮೇಳೈಸುವುದು, ದೇವರೂ, ನಾಗರೀತೆಯ ಬರುವಿಗಾಗಿ ಬದಲಾವಣೆಗಾಗಿ ಕಾಯುತ್ತಿರುವ ಮನಸ್ಸುಗಳನ್ನು ಗುರುತಿಸಬಹುದು.

'ಮಡಿ' ಬ್ರಾಹ್ಮಣರ ಜಗತ್ತಿನಲ್ಲಿರುವ ಈ ಪರಿಕರದ ಸಂಪ್ರದಾಯವನ್ನು ದಲಿತರು ಅನುಕರಣೆಗೊಳಿಸಿರುವುದು. ಇಲ್ಲಿ ನಂಬಿಕೆಗೆ ದೈವತ್ವದ ಭಯವು ಕೂಡಿರುವುದು, ದೇವತೆಗೆ ನೀಡುವ ಬಲಿ, ಬೆಂಕಿಯ ಹೊಂಡ, ಕೊಂಡದಲ್ಲಿ ಬಿದ್ದು ಸಾಯುವುದು, ಎಲ್ಲವು ಈ ಕಥೆಯಲ್ಲಿ ಕಂಡು ಬರುತ್ತದೆ.

### ೪.೫ ಸ್ತ್ರೀ ಪಾತ್ರಗಳು

ಮೊಗಳ್ಳಿ ಗಣೇಶ್ ರವರು ತಮ್ಮ ಕಥೆಗಳಲ್ಲಿ ಸ್ತ್ರೀಪಾತ್ರಗಳನ್ನು ವಿಶಿಷ್ಟವಾಗಿ ಚಿತ್ರಿಸಿದ್ದಾರೆ. ಕೆಲವು ಕಥೆಗಳಲ್ಲಿ. ಸ್ತ್ರೀಗೆ ಹೆಚ್ಚಿನ ಪ್ರಮುಖ್ಯತೆಯನ್ನು ನೀಡಿ ಅವಳನ್ನೆ

ಪ್ರಧಾನವಾಗಿ ಇಟ್ಟು ಕೊಂಡು ಕಥೆ ಹೇಳುತ್ತಾ ಹೋಗುತ್ತಾರೆ. ಅವರ ಕಥೆಗಳಲ್ಲಿ ಬರುವಂತಹ ಸ್ತ್ರೀಪಾತ್ರಗಳು ಒಂದಕ್ಕಿಂತ ಒಂದು ಭಿನ್ನವಾದವುಗಳಾಗಿವೆ.

ನಮ್ಮ ಸಮಾಜ ಪುರುಷ ಪ್ರಧಾನವಾದದ್ದಾಗಿದೆ. ಆದ್ದರಿಂದಾಗಿ ಪುರುಷರ ಬಲ ಹೆಚ್ಚಾಗಿದ್ದು ಸ್ತ್ರೀಗೆ ಈ ಸಮಾಜದಲ್ಲಿ ಹೆಚ್ಚಿನ ಪ್ರಾಮುಖ್ಯತೆಯಿಲ್ಲ. ಅವಳನ್ನು ಒಂದು ಭೋಗದ ವಸ್ತುವನ್ನಾಗಿಸಿಕೊಂಡಿದ್ದಾರೆ. ಶತಮಾನಗಳಿಂದಲೂ ಅವಳ ಮೇಲೆ ದೌರ್ಜನ್ಯವನ್ನು ಮಾಡುತ್ತಿದ್ದಾರೆ. ಅವಳ ದೇಹವನ್ನು ಗುರಿಯಾಗಿಟ್ಟು ಕೊಂಡು ಅವಳಿಗೆ ಹಿಂಸೆಯನ್ನು ನೀಡಿ ಅವಳನ್ನು ತನ್ನ ಹಿಡಿತದಲ್ಲಿಟ್ಟು ಕೊಂಡಿದ್ದಾರೆ. ಸ್ತ್ರೀಯರ ಸುತ್ತಾ ಒಂದು ಚೌಕಟ್ಟನ್ನು ಹಾಕಿ ಅವಳು ಅದನ್ನು ಮೀರಿ ಹೋಗದಂತೆ ಎಚ್ಚರಿಕೆಯನ್ನು ವಹಿಸಿದ್ದಾರೆ. ಅವಳಿಗೆ ತನ್ನದೇಯಾದಂತಹ ಸ್ವಾತಂತ್ರ್ಯ ಎಂಬುದಿಲ್ಲ. ಅವಳ ಬದುಕು ಪುರುಷನ ಅಧೀನಕ್ಕೆ ಒಳಪಟ್ಟಿದೆ.

ಮೊಗಳ್ಳಿ ಗಣೇಶ್‌ರವರು ಕೂಡ ತಮ್ಮ ಕಥೆಗಳಲ್ಲಿ ಪುರುಷರ ದೌರ್ಜನ್ಯಕ್ಕೆ ಒಳಗಾಗುತ್ತಿರುವ ಸ್ತ್ರೀ ಪಾತ್ರಗಳನ್ನು ಚಿತ್ರಿಸಿದ್ದಾರೆ. ಮೊಗಳ್ಳಿಯವರ ಕಥೆಗಳಲ್ಲಿ ಬರುಂತಹ ಸ್ತ್ರೀ ಪಾತ್ರಗಳು ವಿಭಿನ್ನವಾದವುಗಳಾಗಿವೆ. ಅವರು ಎಲ್ಲಾ ರೀತಿಯ ಸ್ತ್ರೀಪಾತ್ರಗಳ ಚಿತ್ರಣವನ್ನು ಕೊಡುತ್ತಾರೆ. ಪುರುಷರ ದಬ್ಬಾಳಿಕೆಗೆ, ದೌರ್ಜನ್ಯಕ್ಕೆ ಒಳಗಾಗಿರುವ ಸ್ತ್ರೀಪಾತ್ರಗಳು, ಅಸಹಾಯಕತೆಯ ಸ್ತ್ರೀಪಾತ್ರಗಳು, ಆತ್ಮಹತ್ಯೆಗೆ ಶರಣು ಹೋಗುವ ಸ್ತ್ರೀಪಾತ್ರಗಳು, ತಮ್ಮ ದೇಹವನ್ನೆ ಅಡವಿಟ್ಟು ಬದುಕು ನಡೆಸುತ್ತಿರುವ ಸ್ತ್ರೀಪಾತ್ರಗಳು, ತನ್ನವರಿಂದ ದೂರ ಹೋಗಿ ಬದುಕು ಕಟ್ಟಿಕೊಳ್ಳುವ ಆಶಯವನ್ನು ಹೊಂದಿರುವ ಸ್ತ್ರೀಪಾತ್ರಗಳು, ಬುದ್ಧಿವಂತಿಕೆಯುಳ್ಳ ಸ್ತ್ರೀಪಾತ್ರಗಳು, ಕೆಚ್ಚೆದೆಯ ಧೈರ್ಯವಂತ ಸ್ತ್ರೀಪಾತ್ರಗಳು. ಹೀಗೆ ನಾನಾ ತರಹದ ಸ್ತ್ರೀಪಾತ್ರಗಳನ್ನು ಮೊಗಳ್ಳಿ ಗಣೇಶ್‌ರವರು ಚಿತ್ರಿಸುತ್ತಾ ಹೋಗುತ್ತಾರೆ. ವಿಶೇಷವೆಂದರೆ ಈ ಎಲ್ಲಾ ಪಾತ್ರಗಳು ಹೆಚ್ಚಾಗಿ ಗ್ರಾಮೀಣ ಪ್ರದೇಶದ ಹಿನ್ನೆಲೆಯಲ್ಲಿಯೇ ಚಿತ್ರಿತಗೊಳ್ಳುತ್ತ ಹೋಗುತ್ತವೆ. ತಾನು ವಾಸಿಸುವ ಪ್ರದೇಶದ ಪರಿಸ್ಥಿತಿಗೆ ಅನುಗುಣವಾಗಿ ನಡೆದು ಕೊಳ್ಳುವ ಸ್ತ್ರೀಯರನ್ನು ನಾವು ಮೊಗಳ್ಳಿಗಣೇಶ್ ರವರ ಕಥೆಗಳಲ್ಲಿ ಗುರುತಿಸಬಹುದು.

ಒಂದು ಹಳೇ ಚಡ್ಡಿ ಕಥೆಯಲ್ಲಿ ಬರುವಂತಹ ನಾಗರಾಜನ ಹೆಂಡತಿ ಸಿದ್ಧಿ ಪಾತ್ರ ಮತ್ತು ಶಾಂತಿಯ ಪಾತ್ರಗಳು ಅಸಹಾಯಕ ಪಾತ್ರಗಳಾಗಿ ಚಿತ್ರಿತಗೊಂಡಿವೆ. ಮದುವೆ ಮನೆಯಲ್ಲಿ ತನ್ನ ಮಗನಿಗೆ ಚಡ್ಡಿ ಹಾಕಲೇ ಬೇಕು ಎಂದು ಹಠ ಮಾಡಿದ ನಾಗರಾಜ ತನ್ನ ಹೆಂಡತಿಗೆ ಚಡ್ಡಿ ಹುಡುಕಿ ಹಾಕುವಂತೆ ಹೇಳುತ್ತಾನೆ. ಆದರೆ ಅವನ ಮಗ ಸೀನಿ ಚಡ್ಡಿಯನ್ನು

ಎಲ್ಲೋ ಎಸೆದದ್ದರಿಂದ ಮದುವೆ ಮನೆಯ ಗಲಾಟೆಯಲ್ಲಿ ಅದನ್ನು ಹುಡುಕಲು ಸಾಧ್ಯವಾಗದೆ ಸಿದ್ಧಿ ತನ ಮಗನಿಗೆ ಚಡ್ಡಿಹಾಕುವುದಿಲ್ಲ. ತನಗೆ ತನ್ನ ಅಪ್ಪ ಆಸ್ತಿಯಲ್ಲಿ ಪಾಲು ಕೊಡುತ್ತಿಲ್ಲ ಎಂಬ ಸಿಟ್ಟು ಮತ್ತು ತನ್ನ ಅಣ್ಣ ಯಾರಿಗೂ ತಿಳಿಯದಂತೆ ಆಸ್ತಿಯನ್ನು ಸಾವುಕಾರನ ಹತ್ತಿರ ಅಡವಿಟ್ಟು ದುಡ್ಡು ಪಡೆದಿರುವನೆಂಬ ಕೋಪ, ಪೌರುಷಗಳನ್ನೆಲ್ಲ ತನ್ನ ಹೆಂಡತಿ ಸಿದ್ಧಿಯ ಮೇಲೆ ತೋರಿಸ ತೊಡಗಿದ. ಈಗಾಗಲೇ ನಾಗರಾಜನ ಎರಡನೆ ಹೆಂಡತಿ ಅವನ ಕಾಟವನ್ನು ತಾಳಲಾರದೆ ಅವನನ್ನು ಬಿಟ್ಟು ಹೋಗಿದ್ದಳು.

ಪುರುಷರಿಗೆ ಹೊರ ಸಮಾಜದ ಮೇಲಿನ ನೋವು ಕೋಪವನ್ನು ಶಮನ ಮಾಡಿ ಕೊಳ್ಳಲು ಇರುವ ಏಕೈಕ ತಂತ್ರ ಎಂದರೆ ಅಸಹಾಯಕಳಾದ ತನ್ನ ಹೆಂಡತಿಯನ್ನು ದಂಡಿಸುವುದು. ನಾಗರಾಜ ಈ ಕಥೆಯಲ್ಲಿ ಮಾಡುವುದು ಅದನ್ನೇ ತನ್ನೆಲ್ಲಾ ಕೋಪ ತಾಪಗಳನ್ನು ಅಸಹಾಯಕಳಾದ ತನ್ನ ಹೆಂಡತಿ ಸಿದ್ಧಿಯ ಮೇಲೆ ತೋರಿಸುತ್ತಾನೆ. ಚಡ್ಡಿ ಹಾಕಲೇ ಬೇಕು ಎಂದು ಏಳುವುದು ನೆಪಮಾತ್ರವಾಗಿ ಕಂಡುಬರುತ್ತದೆ. ತನೆಲ್ಲಾ ಕೋಪತಾಪಗಳನ್ನು ಹೆಂಡತಿಯ ಮೇಲೆ ಪ್ರದರ್ಶನ ಮಾಡಲು, ತನ್ನ ಪೌರುಷವನ್ನು ತೋರಿಸಲು ಅದನ್ನು ಅಸ್ತ್ರವಾಗಿಬಳಸಿಕೊಳ್ಳುತ್ತಾನೆ.

ಈ ಕಥೆಯಲ್ಲಿ ಬರುವ ಸಿದ್ಧಿ ಪಾತ್ರವು ಅಸಹಾಯಕ ಪಾತ್ರವಾಗಿ ಕಂಡು ಬರುತ್ತದೆ. ಹೊಸದಾಗಿ ಮದುವೆಯಾದಂತಹ ಮದುಮಗನ ಮುಂದೆ ತಮಗೆ ಅವಮಾನವಾಗಬಾರದೆಂದು ಅವನ ಜೊತೆ ಜಗಳವಾಡದೆ ಸಹಿಸಿಕೊಂಡಿದ್ದಳು ಆದರೆ ಅವಳ ಸಹನೆಯನ್ನೇ ದೌರ್ಬಲ್ಯ ಎಂದು ತಿಳಿದ ನಾಗರಾಜ ಅವಳ ಮೇಲೆ ತನ್ನ ಬಲವನ್ನು ಪ್ರದರ್ಶನ ಮಾಡಿದನು. ಅವನಿಂದ ಏಟು ತಿಂದು ಅವಮಾನಿತಳಾದ ಸಿದ್ಧಿ ಮನೆಬಿಟ್ಟು ಹೋದಳು.

ಇದೇ ಕಥೆಯಲ್ಲಿ ಬರುವಂತಹ ಇನ್ನೊಂದು ಪಾತ್ರ ಶಾಂತಿಯದು. ಅವಳು ಕೂಡ ಅಸಹಾಯಕ ಸ್ಥಿತಿಯಲ್ಲಿ ಇರುವಂತವಳು. ತನ್ನ ಮದುವೆಯ ಸಂಭ್ರಮವನ್ನು ಅನುಭವಿಸಲಾಗದ ನತದೃಷ್ಟೆ. ತಾಯಿಯನ್ನು ಕಳೆದುಕೊಂಡ ಇವಳ ಬದುಕು ತಂದೆಯ ಬೇಜವಾಬ್ದಾರಿಯಿಂದಾಗಿ ಅತಂತ್ರ ಸ್ಥಿತಿಯಲ್ಲಿದ್ದು ತಾತನಿಂದಾಗಿ ಒಂದು ನೆಲೆಯನ್ನು ಕಂಡು ಕೊಳ್ಳುತ್ತಿರಬೇಕಾದಂತಹ ಸಂದರ್ಭದಲ್ಲಿ ತನ್ನ ಚಿಕ್ಕಪ್ಪ ತೆಗೆದಂತಹ ಜಗಳದಿಂದಾಗಿ ಭಯಗೊಂಡು ಅಸಹಾಯಕಳಾಗಿ ಅವನ ಕಾಲುಗಳನ್ನು ಹಿಡಿದುಕೊಂಡು ಬೇಡಿಕೊಳ್ಳುತ್ತಾಳೆ.

**ಅಲ್ಲಿ ಆ ಅಳು ಈಗಲೂ**

ಈ ಕಥೆಯಲ್ಲಿ ಬರುವ ಹೂವನ ತಾಯಿ ಸಿದ್ಧಿಯ ಪಾತ್ರವು ಅಸಹಾಯಕ ಪಾತ್ರವಾಗಿದೆ. ಆದರೆ ಒಂದು ಹಳೇ ಚಡ್ಡಿ ಕಥೆಯಲ್ಲಿ ಬರುವ ಸಿದ್ಧಿಯ ಪಾತ್ರಕ್ಕಿಂತ ಸ್ವಲ್ಪ ಭಿನ್ನವಾದದ್ದು. ಒಂದು ಹಳೇ ಚಡ್ಡಿ ಕಥೆಯಲ್ಲಿ ಬರುವ ಸಿದ್ಧಿ ಪರಿಸ್ಥಿತಿಯನ್ನು ಎದುರಿಸಲು ಸಾಧ್ಯವಾಗದೆ ಅದಕ್ಕೆ ಬೆನ್ನು ಮಾಡಿ ಹೊರಟು ಹೋದರೆ ಅಲ್ಲಿ ಅ ಅಳೂ ಈಗಲೂ ಕಥೆಯಲ್ಲಿ ಬರುವ ಸಿದ್ಧಿ ಅಸಹಾಯಕಳಾದರೂ ಪರಿಸ್ಥಿತಿಗೆ ಎದರಿ ಓಡಿ ಹೋಗದೆ ಅದನ್ನು ಎದುರಿಸುವವಳು. ಒಂದು ಹಳೇ  ಚಡ್ಡಿ ಕಥೆಯಲ್ಲಿ ಬರುವ ಸಿದ್ಧಿ ತನ್ನ ನೋವು ಸಂಕಟವನ್ನು ಸಹಿಸಿಕೊಂಡರೆ ಅಲ್ಲಿ ಆ ಅಳು ಈಗಲೂ ಕಥೆಯಲ್ಲಿ ಬರುವ ಸಿದ್ಧಿ ತನ್ನ ಜೀವನದ ಎಷ್ಟೋ ಹತಾಶೆ, ಸಂಕಟ, ಸಿಟ್ಟುಗಳಿಂದೆಲ್ಲ ಚಿಟ್ಟು ಹಿಡಿದಿದ್ದವಳು ಅದೆಲ್ಲವನು ತನ್ನ ಮಗ ಹೂವನ ಬೆನ್ನ ಮೇಲೆ ಬಡಿಯುವುದರ ಮೂಲಕ ತೋರಿಸಿಕೋಳ್ಳುತ್ತಾಳೆ.

ತನ್ನ ಹಿಡಿ ಪರಿಸ್ಥಿತಿಗೆ ತನ್ನ ಮಗ ಹೂವನೇ ಕಾರಣ ಎಂದು ಬೈಯುತ್ತಿದ್ದಳು 'ತೊಟ್ಲಲಿದ್ದಾಗ್ಲೆ ಕತ್ ಚಿಮ್ಕಿ ಸಾಯಿಸ್ ಬೇಕು ಅನ್ಕಂಡಿದ್ದೆ ಎನ್ ಮಾಡ್ಲವ್ಲಾ ಗ್ರಾಚಾರ ಹಿಡ್ಕಂದದೆ ಅವುನಿಂದ ನಾ ಬದ್ಕುವಂಗಿಲ್ಲ ಎಂದು ಹಣೆ ಚಚ್ಚಿ ಕೊಂಡು ಈ ಮಗನಾ ಎರುವಾಗ ಎಂತಾ ಬಾದೆ ತಿಂದೆ ಸತ್ತೆ ಹೋಯ್ತುಳೆ ಅಂತಾ ಎಲ್ರೂ ಅಂತಿದ್ರಲ್ಲಾ ಎತ್ಮೇಲಾದು ಆಳಾದ್ ಗಂಡ ಅನ್ನಿಸ್ಕೋನು ಬಾಣಂತನಾ ಅಂತ ಒಂದಿನಾರೂ ಸೀಗ್ಡಿ ಕರ್ಮೀನು ಅಂತಾ ತಂದ್ಕೊಡ್ಲಿಲ್ಲ ಒಂದೆಣ್ಣೆ ಒಂದೂಟ ಅಂತಾ ಮಾಡ್ಲಿಲ್ಲ ಯಾವ್ ನನ್ ಸವುತಿಯೂ ಎಂಗಿದ್ದೀಯಮ್ಮೀ ಅನ್ಲಿಲ್ಲಾ ನನುಗ್ ನಾನೇ ಈದ್ ನಾಯಂಗೆ ಏನೂ ತಿನ್ನುಕಿಲ್ದೆ, ಕೊಳ್ ಬಾಡ್ನೆ ಅವ್ರಿವ್ರು ಎಲ್ಲೊ ಸತ್ ದನುದ್ನೆ ತಂದ್ಕೊಟ್ಟುದಾ ತಿನ್ಕಂದು ಇವ್ನ ಸಾಕುದ್ನಲ್ಲಾ ಚನ್ನಗೆ ಎಂಜ್ಲೆಂಡ್ವ ನೆಕ್ಕ ಬಂದು ಇದೂ ನನುಗುಟ್ಟಿದ್ದದೆ ಈ ಕರಿಮೊರೆ ವೊತ್ತಿರುದು ಅಂತ ಒಂದ್ಚುಂದ್ಕಾದ್ರೂ ಒಂದಿನ್ ವಾದ್ರೂ ಎತ್ಕ ಮುತ್ತಿಕ್ಕದೆ ಕೈ ಬುಟ್ ಬುಟಾ ಗಂಡಾ ಅನ್ನಿಸ್ಕೋನು..... ಹಾಳಾದೆದೆಲಿ ಒಂತೊಟ್ಟು ಹಾಲಿಲ್ದೆ ವಂಗ್ಲೊ ಅಂತ ಅಗ್ಲೂ ರಾತ್ರಿ ಆಗ್ಲೂ ಇಂಗೆ ಬಡ್ಕತಿದ್ನಲ್ಲಾ ....ಏನ್ ಕೊಡ್ಲಿಲ್ಲ ಅಂತ ಇಂಗತ್ತನ್ನು ಯಾವ್ ಬಾಡ್ಮಾಡ್ಕಂದು ಅನ್ನ ಮಾಡ್ಕಂದು ತಿಂಡಿ ಮಾಡ್ಕಂದು ಒಂದಿಂಕ್ರನೂ ಕೊಡ್ದಂಗೇನಾರ ನಾವೇ ತಿಂಕದಿದ್ದೇವಾ ಎಂದು ತನ್ನ ಅನಿಸಿದಂತೆಲ್ಲ ಲೆಕ್ಕ ಹಾಕಿಕೊಂಡು ತನ್ನ ಬದುಕಿನ ಬಗ್ಗೆ ತಾನೇ ಬೇಸರವನ್ನು ವ್ಯಕ್ತಪಡಿಸಿದಳು.

ಹೂವನ ತಂದೆ ಹೂವನಿಗೆ ದೆವ್ವ ಬಂದಿದೆ ಎಂದು ಹೊಡೆಯುತ್ತಿರುವ ಸಂದರ್ಭದಲ್ಲೂ ದುಃಖ ತಡೆಯಲಾರದೆ ಮರೆಯಲ್ಲಿ ನಿಂತು ಬಿಕ್ಕತೊಡಗಿದಳು. ಹೂವನ ತಾತ ಮೆತ್ಗೊಡಿಯೋ ಎಳೆ ಮೈ ತಡಿಲಾರ್ದು ಏಟಾ ಅಯ್ಯೋ ಮೆತ್ಗೆಕಲಾ ಆಟ್ ಮ್ಯಾಕೆ ಎತ್ತಿ ಕುಕ್ಕುದ್ರೆ ಬದ್ಕನ್ಲಾ ಎಂದ ಮಾತು ಆ ದೇವರು ಆ ದೆವ್ವೆ ಆ ಹೂವ ಆ ದುಃಖ ಆ ಆಳು ಆ ಆರ್ತಕೂಗು ಆ ಅಪ್ಪ ಆ ಜನ ಆ ಅರ್ಥ ಕಳಕೊಂಡ ಎಲ್ಲ ಕ್ಷಣಗಳಲ್ಲಿ ಅದನೆಲ್ಲ ನೋಡಲಾರದೆ ಸಿದ್ಧಿ ಅಸಹಾಯಕತೆಯಿಂದ ಅಯ್ಯೋ ಭಗವಂತಾ ಈ ಕೋಲೇನೆಲ್ಲಾ ನೋಡುಕೆ ಆಗುವುದಿಲ್ಲ ಕರ್ಕಳೋ ನಿನ್ ಮಗುನ್ ತಿನ್ನಾ ಎಂದು ಅಳುತ್ತಿದ್ದಳು.

ಇಷ್ಟೇ ಅಲ್ಲದೆ ಇನ್ನೂ ಅನೇಕ ಪಾತ್ರಗಳು ಬರುತ್ತವೆ. ಅತ್ತೆ ಕಥೆಯಲ್ಲಿ ಬರುವ ಅತ್ತೆ ಪಾತ್ರ, ಕಿಚ್ಚು ಕಥೆಯಲ್ಲಿ ಬರುವ ಸಾಕಿ, ಬಾಳು ಕಥೆಯಲ್ಲಿ ಬರುವ ಮಾರೆ, ಕಾಳಿ ಕಥೆಯ ಕಾಳಿ, ಬಾಡುಟ ಕಥೆಯಲ್ಲಿ ಬರುವ ಮಾದೇವಿ, ಕಾಳಗದ ಹುಂಜ ಕಥೆಯಲ್ಲಿ ಬರುವ ಅವ್ವನ ಪಾತ್ರ, ಭೂಮಿ ಕಥೆಯಲ್ಲಿ ಬರುವ ದೊಂಬನ ಹೆಂಡತಿ, ಹಬ್ಬ ಕಥೆಯಲ್ಲಿ ಬರುವ ಅತ್ತೆ ಪಾತ್ರ, ಬತ್ತ ಕಥೆಯಲ್ಲಿ ಬರುವ ತೋಪಮ್ಮ, ಆ ಹೆಂಗಸು ಕಥೆಯಲ್ಲಿ ಬರುವ ಕೆಂಪಿ. ಈ ಪಾತ್ರಗಳಲ್ಲಿ ಅಸಹಾಕಯತೆ, ಸಮಾಜದ ಮೇಲೆ ಸಿಟ್ಟು, ಸಹನೆ, ಕಿಚ್ಚು, ಧೈರ್ಯ, ತಂತ್ರಗಳನ್ನು ಬಳಸುವುದು, ಸಮಾಜವನ್ನು ಎದುರಿಸಿ ನಿಲ್ಲುವುದು, ಸಮಾಜಕ್ಕೆ ಎದರಿ ಓಡಿ ಹೋಗುವುದು, ತನ್ನ ದ್ವೇಷ ತೀರಿಸಿಕೊಳ್ಳುವುದು ಇವುಗಳನ್ನು ಗುರುತಿಸಬಹುದು.

**ಅತ್ತೆ**

ಈ ಕಥೆಯಲ್ಲಿ ಬರುವ ಅತ್ತೆ ಪಾತ್ರ ವಿಶಿಷ್ಟವಾದದ್ದು ಸಹನೆಯ, ಧೈರ್ಯದ, ಸಿಡಿದುನಿಲ್ಲುವ ಪಾತ್ರವಾಗಿ ನಾವು ಇದನ್ನು ಗುರುತಿಸಬಹುದು. ಗಂಡನನ್ನು ತಿರಸ್ಕರಿಸುವ, ತನ್ನ ಅಣ್ಣಂದಿರು ಎಷ್ಟೇ ಹಿಂಸೆ ಕೊಟ್ಟರು ಅದನ್ನು ಸಹಿಸುವ, ದೌರ್ಜನ್ಯಕ್ಕೆ ಕೊನೆಯೇ ಇಲ್ಲ ಎನ್ನಿಸಿದಾಗ ಸಿಡಿದು ನಿಲ್ಲವ ಪಾತ್ರವಾಗಿ ಕಂಡು ಬರುತ್ತದೆ.

ಕಿಚ್ಚು ಕಥೆಯಲ್ಲಿ ಬರುವ ಸಾಕಿ ಪಾತ್ರ ಎಲ್ಲಾ ಸ್ತ್ರೀ ಪಾತ್ರಗಳಿಗಿಂತ ವಿಭಿನ್ನವಾಗಿದ್ದು, ಸಮಾಜದ ಕಟ್ಟುಪಾಡಿಗಾಗಲೀ, ನಿಯಮಗಳಿಗಾಗಲೀ ಬೆಲೆ ಕೊಡದೆ ತನ್ನ ಜೀವನವನ್ನು ತನಗೆ ಇಷ್ಟ ಬಂದಂತೆ ನಡೆಸಿಕೊಂಡು ಹೋಗುವುದನ್ನು ಇಲ್ಲಿ ಕಾಣಬಹುದು. ಜನ ಅವಳ ಬಗ್ಗೆ ಕೆಟ್ಟದ್ದಾಗಿ ಮಾತಾಡಿಕೊಂಡರು ಅವಳು ಅದಕ್ಕೆ ಬೆಲೆಯೇ ಕೊಡದಿದ್ದದ್ದು, ತನ್ನ

ದೇಹದ ಬಯಕೆಗಳನ್ನು ಪೂರೈಸಿಕೊಳ್ಳುವ ಪ್ರಯತ್ನವನ್ನು ಮಾಡುವುದು, ಎಲ್ಲರನ್ನು ಎದುರಿಸಿ ಸವಾಲು ಹಾಕುವ ಪಾತ್ರವಾಗಿ ಕಂಡು ಬರುತ್ತಾಳೆ.

**ಬಾಳು**

ಈ ಕಥೆಯಲ್ಲಿ ಬರುವ ಸಾಕಿ ಮಾರೆ ಕಿಚ್ಚು ಕಥೆಯಲ್ಲಿ ಬರುವ ಮಾರೆ ಸಾಕಿಗಿಂತ ಭಿನ್ನ ಸಾಕಿ ತನ್ನ ಬಯಕೆಗಳ ಪೂರೈಕೆಗಾಗಿ ದೇಹ ಸಂಬಂಧವನ್ನು ಬೆಳೆಸಿದರೆ ಮಾರೆ ತನ್ನ ಬದುಕನ್ನು ನಡೆಸುವ ಅನಿವಾರ್ಯತೆಗಾಗಿ ದೇಹವನ್ನು ತೆರೆದಿಡುತ್ತಾಳೆ. ಆದರೆ ಸಾಕಿಯಲ್ಲಿರುವ ಕೆಚ್ಚು, ಧೈರ್ಯ ಮಾರೆಯಲ್ಲಿ ಇಲ್ಲ. ಅವಳು ಸಮಾಜದ ಜನಕ್ಕೆ ಎದರುತ್ತಿದ್ದವಳು. ತನ್ನ ಬಗ್ಗೆ ಮಾತಾಡುತ್ತಿದ್ದ ಜನರಿಗೆ ಸವಾಲು ಹಾಕಿ ಅಲ್ಲೇ ಬದುಕುವ ಪ್ರಯತ್ನವನ್ನು ಮಾಡುತ್ತಿದ್ದರೆ ಮಾರೆ ತನ್ನ ತಮ್ಮನನ್ನು ಎದುರಿಸುವ ಧೈರ್ಯವನ್ನು ತೋರಿಸದೆ ಮನೆಯನ್ನೆ ಬಿಟ್ಟು ಹೋಗುತ್ತಾಳೆ.

**ಕಾಳಿ**

ಈ ಕಥೆಯ ಕಾಳಿ ಪಾತ್ರ ವಿಶೇಷವಾದ ಪಾತ್ರವಾಗಿದ್ದು ಇಂತಹ ಪಾತ್ರಗಳು ಸಮಾಜದಲ್ಲಿ ಅಪರೂಪವಾಗಿವೆ. ಗಂಡ ಸತ್ತನಂತರ ಊರಿನ ಕಸಗುಡಿಸಿವ ಊರನ್ನ ಶುದ್ಧಿಮಾಡುವ ಕಾಯಕವನ್ನೆ ತನ್ನ ಕರ್ತವ್ಯ ಎಂದು ಭಾವಿಸಿದ್ದವಳು, ಭಿಕ್ಷೆ ಬೇಡಿ ಜೀವನವನ್ನು ನಡೆಸುತ್ತಿದ್ದರು ಊರಿನ ಮಕ್ಕಳಿಗೆ ತನ್ನಿಂದಾಗುವ ಸಹಾಯವನ್ನು ಮಾಡುತ್ತಿದ್ದವಳು, ಯಾವುದೇ ಫಲಾಪೇಕ್ಷೆಯಿಲ್ಲದೆ ಕೆಲಸವನ್ನು ಮಾಡುತ್ತಿದ್ದವಳು ಇಂತಹ ಕಾಳಿ ತನ್ನ ಮಗನಿಗೆ ಸರಿಯಾದ ಪಾಲು ಬರಲಿಲ್ಲ ಎಂಬ ಕಾರಣಕ್ಕೆ ತನ್ನ ಇಳಿ ವಯಸ್ಸಿನಲ್ಲೂ ಮಗನ ಪರವಾಗಿ ಜಗಳ ಮಾಡಿದ್ದವಳು, ತನ್ನವರ ಮಾನ ಮರ್ಯಾದೆಯನ್ನು ಬೀದಿ ಪಾಲುಮಾಡಿ ಬದುಕುವ ಬದುಕನ್ನು ಇಷ್ಟಪಡದವಳಾಗಿದ್ದಳು.

**ಬಾಡೂಟ**

ಈ ಕಥೆಯಲ್ಲಿ ಬರುವಂತಹ ಮಾದೇವಿ ಮತ್ತು ಸಾಕಿ ಪಾತ್ರಗಳು ಸಮಾಜದಲ್ಲಿರುವ ಹೆಂಗಸರನ್ನೆ ಹೋಲುತ್ತವೆ. ಸಾಕಿ ತಾಯನ್ನು ಕಳೆದು ಕೊಂಡವಳು ಮಾದೇವಿ ಸಾಕಿಯ ತಂದೆಗೆ ಎರಡನೆ ಹೆಂಡತಿಯಾಗಿ ಬಂದವಳು ಇವರಿಬ್ಬರ ಸಂಬಂಧದಲ್ಲಿ ಒಡಕು ಮೂಡಿತ್ತು. ಸಾಕಿ ತನ್ನ ತಬ್ಬಲಿತನ, ಹಸಿವು, ಹತಾಶೆಗಳಿಂದ ಸ್ಫೋಟಗೊಂಡವಳಾಗಿದ್ದು ತನ್ನೆಲ್ಲಾ ಆಕ್ರೋಶಗಳನ್ನು ತನ್ನ ಮಲತಾಯಿಯ ಮೇಲೆ ತೋರಿಸುವವಳಾಗಿದ್ದಾಳೆ.

ಮಾದೇವಿ ಅಸಹನೆಯಿಂದ ಅವಳ ಜೊತೆಯಲ್ಲಿ ಜಗಳ ಮಾಡುತ್ತಿದ್ದರು ಅವಳಲ್ಲಿ ಯಾವುದೇ ಕಲ್ಮಶಗಳಿಲ್ಲ. ಅಸಹಾಯಕಳು ಆಗಿದ್ದಾಳೆ. ಗಂಡನ ದೌರ್ಜನ್ಯಕ್ಕೆ ಸಿಕ್ಕ ಮಾದೆವಿ ಸ್ವಲ ದುಡುಕು ಸ್ವಭಾವದವಳಾಗಿದ್ದು ತನ್ನ ಸಾವನ್ನು ತಾನೆ ತಂದುಕೊಳ್ಳುತ್ತಾಳೆ.

**ಕಾಳಗದ ಹುಂಜ**

ಈ ಕಥೆಯಲ್ಲಿ ಬರುವ ಅವ್ವನ ಪಾತ್ರ, ಈ ಪಾತ್ರ ತನಗೂ ಹೊರಪ್ರಂಪಚದ ಯಾವುದೇ ಕ್ರೌರ್ಯಗಳಿಗು ಸಂಬಂಧವೇ ಇಲ್ಲ ಎನ್ನುವ ರೀತಿಯಲ್ಲಿ ಇದ್ದವಳು ಆಗಾಗಿ ಅವಳು ಅವಳ ಗಂಡನ ಜೊತೆಯಾವುದೇ ಸಂಬಂಧವನ್ನು ಇಟ್ಟು ಕೊಂಡಿರಲಿಲ್ಲ ಯಾವಾಗಲು ದೇವರ ಪೂಜೆಯಲ್ಲೆ ಮುಳುಗಿರುತ್ತಾಳೆ. ಒಂದು ಸಲ ಮಾತ್ರ ಗಂಡನನ್ನು ವಿರೋದಿಸುವ ಪ್ರಯತ್ನವನ್ನು ಮಾಡಿದ್ದರು ಅದರಲ್ಲಿ ಸೋಲನ್ನು ಕಾಣುತ್ತಾಳೆ. ದೇವರ ಪೂಜೆಮಾಡುತ್ತಲೆ ಸಾಯುತ್ತಾಳೆ.

**ಹಬ್ಬ**

ಈ ಕಥೆಯಲ್ಲಿ ಬರುವ ಅತ್ತೆ ಪಾತ್ರ ಮತ್ತು ಕೊಂಡ ಕಥೆಯಲ್ಲಿ ಬರುವ ಸಾವಿತ್ರಿ ಪಾತ್ರ ಎರಡು ವಿರುದ್ಧವಾದವುಗಳಾಗಿವೆ. ಹಬ್ಬ ಕಥೆಯಲ್ಲಿ ಬರುವ ಅತ್ತೆ ಗೌಡನಿಂದ ದೌರ್ಜನ್ಯಕ್ಕೆ ಒಳಗಾಗಿ ಹುಚ್ಚಿಯಾಗಿದ್ದರೂ ತನ್ನ ಸೇಡನ್ನು ತೀರಿಸಿಕೊಳ್ಳುತ್ತಾಳೆ. ಆದರೆ ಕೊಂಡ ಕಥೆಯಲ್ಲಿ ಬರುವ ಸಾವಿತ್ರಿ ರುದ್ರನಿಂದ ಅತ್ಯಾಚಾರಕ್ಕೆ ಒಳಗಾದಾಗ ಅವಳನ್ನು ಅವಳ ಅಣ್ಣನೇ ಕೊಲೆ ಮಾಡುತ್ತಾನೆ.

**ಆ ಹೆಂಗಸು**

ಈ ಕಥೆಯಲ್ಲಿ ಬರುವ ಕೆಂಪಿ. ಈ ಪಾತ್ರ ಬೇರೆ ಕಥೆಗಳಲ್ಲಿ ಬರುವ ಸ್ತ್ರೀ ಪಾತ್ರಗಳಿಗಿಂತ ವಿಭಿನ್ನವಾಗಿಯೂ ಹಾಗೆಯೆ ವಿಶಿಷ್ಟವಾಗಿರುವುದನ್ನು ಗುರುತಿಸಬಹುದು. ಯಾರ ತಂಟೆಗೂ ಸಹವಾಸಕ್ಕೂ ಹೋಗದ ಈ ಹೆಂಗಸಿನ ಬಗ್ಗೆ ಆ ಊರಿನ ಹೆಂಗಸರಿಗೂ ಪ್ರೀತಿ. ಗಂಡ ಸತ್ತ ನಂತರ ಇವಳನ್ನು ತನ್ನ ವಶಮಾಡಿಕೊಳ್ಳಲು ಯಾರೇ ಪ್ರಯತ್ನಿಸಿದರೂ ಅದು ಸಾಧ್ಯವಾಗುವುದಿಲ್ಲ. ಸಾಧು, ಪೂಜಾರಿ, ಊರಿನ ಗೌಡ ಎಲ್ಲರೂ ಪ್ರಯತ್ನಿಸಿದರೂ ಅವಳನ್ನು ವಶಪಡಿಸಿಕೊಳ್ಳಲು ಸಾಧ್ಯವಾಗುವುದಿಲ್ಲ. ಪೂಜಾರಿಯಂತು ಅನೇಕ ತಂತ್ರಗಳನ್ನು ಮಾಡುತ್ತಾನೆ ಆದರೆ ಅದಕ್ಕೆ ಪ್ರತಿಯಾಗಿ ಅವಳು ಪ್ರತಿತಂತ್ರಗಳನ್ನು ಮಾಡುತ್ತಾ ತನ್ನನ್ನು ತಾನೇ ರಕ್ಷಣೆ ಮಾಡಿಕೊಳ್ಳುತ್ತಾಳೆ.

ಬತ್ತ

ಈ ಕಥೆಯ ತೋಪಪ್ಪ ತುಂಬ ಧೈರ್ಯವಂತೆಯಾಗಿ ಕಂಡು ಬರುತ್ತಾಳೆ. ಬತ್ತದ ಬಗ್ಗೆ ತಾನು ಕಂಡಿದ್ದ ಕನಸನ್ನು ನೆನಸು ಮಾಡಿಕೊಳ್ಳಲು ಪೋಲಿಸರನ್ನೆ ಎದುರಿಸಿದ ದಿಟ್ಟೆ. ಪೋಲಿಸರು ಅವಳನ್ನು ಹಿಡಿದುಕೊಂಡು ಹೋಗುತ್ತಿದ್ದ ಸಂದರ್ಭದಲ್ಲಿ ಅವಳು ಅವರಿಗೆ ಚಳ್ಳೆ ಹಣ್ಣನ್ನು ತಿನ್ನಿಸಿ ಅವರಿಂದ ತಪ್ಪಿಸಿ ಕೊಂಡು ಹೋಗುತ್ತಾಳೆ.

ಹೀಗೆ ಮೊಗಳ್ಳಿ ಗಣೇಶ ಅವರು ತಮ್ಮ ಕಥೆಗಳನ್ನು ವಿಭಿನ್ನವಾದ, ವಿಶಿಷ್ಟವಾದ, ವಿಶೇಷವಾದ, ಅಸಹಾಯಕ, ಧೈರ್ಯದ, ಬುದ್ಧಿವಂತಿಕೆಯ ಪಾತ್ರಗಳನ್ನು ಚಿತ್ರಿಸಿದ್ದಾರೆ.

## ೪.೬ ಕನಸಿನ ಚಿತ್ರಣ.

ಕನಸುಗಳನ್ನು ಎರಡು ರೀತಿಯದನ್ನಾಗಿ ವಿಭಾಗಿಸಬಹುದು. ವ್ಯಕ್ತಿಯೊಬ್ಬ ತನ್ನ ಬದುಕು ಹೇಗಿದ್ದರೆ ಚೆನ್ನ, ತಾನು ಹೇಗೆ ಬದುಕಬೇಕು ಎಂಬುದರ ಬಗ್ಗೆ ಕಾಣುವ ಕನಸು ಇದನ್ನು ಹಗಲುಗನಸು ಎಂದುರು ಕರೆಯುತ್ತೇವೆ ಇದು ಒಂದು ರೀತಿಯದಾದರೆ ಮತ್ತೊಂದು ವ್ಯಕ್ತಿಯು ನಿದ್ರೆ ಮಾಡುತ್ತಿರುವಾಗ ಕಾಣುವ ಕನಸು. ಮೊದಲ ರೀತಿಯ ಕನಸಿನಲ್ಲಿ ಕನಸು ಅವನ ಹಿಡಿತದಲ್ಲಿ ಇರುತ್ತದೆ. ಹಗಲುಗನಸು ಮನುಷ್ಯನ ನಿಯಂತ್ರಣದಲ್ಲಿ ಇರುತ್ತದೆ. ತನ್ನ ಇಚ್ಚೆಗೆ, ಆಸೆಗೆ ತಕ್ಕ ಹಾಗೆ ಕನಸನ್ನು ಕಾಣುತ್ತಾನೆ ಆದರೆ ಎರಡನೆಯದರಲ್ಲಿ ಕನಸು ವ್ಯಕ್ತಿಯ ಹಿಡಿತದಲ್ಲಿ ಇರುವುದಿಲ್ಲ. ಇಲ್ಲಿ ವಿಚಿತ್ರ ರೀತಿಯ ಕನಸುಗಳನ್ನು ಕಾಣುತ್ತಾನೆ.

ಮೊಗಳ್ಳಿ ಗಣೇಶ್ ಅವರು ತಮ್ಮ ಕಥೆಗಳಲ್ಲಿ ಎರಡು ರೀತಿಯ ಕನಸುಗಳನ್ನು ಬಳಸಿ ಕೊಂಡಿದ್ದಾರೆ. ಮೊಗಳ್ಳಿ ಗಣೇಶ್ ಅವರು ಮನುಷ್ಯನ ನಿಯಂತ್ರಣವನ್ನು ಮೀರಿ ಬರುವ ಕನಸುಗಳನ್ನು ಮುಂದಿನ ದುರಂತವನ್ನು ಹೇಳುವ ಕನಸುಗಳಾಗಿ ಬಳಸಿ ಕೊಂಡಿದ್ದಾರೆ. ಉದಾಹರಣೆಯಾಗಿ ಕಾಳಗದ ಹುಂಜ, ತೋಪು ಕಥೆಯನ್ನು ಗುರುತಿಸಬಹುದು.

ಕಾಳಗದ ಹುಂಜ

ಈ ಕಥೆಯಲ್ಲಿ ರಾಜ ಎಂಬ ಬಾಲಕನಿಗೆ ಬರುವ ಕನಸಿನ ಮೂಲಕ ಮುಂದೆ ನಡೆಯುವ ದುರಂತವನ್ನು, ಮನುಷ್ಯನ ಕ್ರೌರ್ಯವನ್ನು ಚಿತ್ರಿಸಿದ್ದಾರೆ.

"ತಾತ ಹೇಳಿದ ಪ್ರಳಯ ಪಕ್ಷಿ ಇದೇ ಎಂದು ರಾಜನಿಗೆ ಖಾತ್ರಿಯಾಯಿತು. ಅದೇ ಹುಂಜ ಅದೇ ಕಲ್ಲಾಗಿ ಮಲಗಿದ್ದ ಹುಂಜ ಮೇಲೆದ್ದು ಹಾರುತ್ತಿದೆ ಎನಿಸಿತು. ಅದರ ಎರಡೂ ರೆಕ್ಕೆಗಳು ಪೂರ್ವ ಪಶ್ಚಿಮವಾಗಿ ಉದ್ದಕ್ಕೂ ಅಗಾಧವಾಗಿ ವಿಸ್ತರಿಸಿಕೊಂಡು ಬಡಿಯುತ್ತಿದ್ದವು.

ಆರೆಕ್ಕೆ ಬಡಿತಕ್ಕೆ ಬಿರುಗಾಳಿಗಳು ಭುಗಿಲೇಳುತ್ತಿದ್ದವು. ಸುಂಟರಗಾಳಿ ಆಕಾಶದುದ್ದಕ್ಕು ಸುರುಳಿಯಾಗಿ ಏರುತ್ತ ಭೂಮಿಯ ಉದ್ದಕ್ಕೂ ಅಪಾರ ವೇಗದಲ್ಲಿ ತೂರಿ ಹೋಗುತ್ತ ಬಾಯಲ್ಲಿ ಸಿಕ್ಕಿದ ಎಲ್ಲ ಗುಡಿಸಲುಗಳನ್ನು ಎತ್ತುಕೊಂಡು ಓಡುತ್ತಿತ್ತು. ಊರು ಊರೇ ತರಗೆಲೆಗಳಂತೆ ತೂರಿಹೋಗುತ್ತಿತ್ತು. ಭೂಮಂಡಲವೇ ಆ ಹುಂಜದ ಕೂಗಿನಿಂದ ಕಂಪಿಸುತ್ತಿತ್ತು. ಭೂಗರ್ಭದ ಲಾವಾರಸ ಚಿಮ್ಮುತ್ತ ಸಮುದ್ರಗಳು ಮರೆಯಲೆಂದು ಆ ಪಕ್ಷಿ ಹೇಳುತ್ತಿರುವಂತೆ ಕೇಳಿಸಿತು. ಅಲ್ಲೆಲ್ಲೋ ತನ್ನ ಅವ್ವ ತೇಲಿ ಹೋಗುತ್ತಿರುವಂತೆ ಕಂಡು 'ಅವ್ವೋ ಅವ್ವೋ ನಾನು ಬತ್ತಿನಿ ನಿಲ್ಲವ್ವೋ' ಎಂದು ತಾನೇ ಕೂಗುತ್ತಾ ದಿಕ್ಕಾಪಾಲಾಗಿ ಓಡುತ್ತಿರುವವರ ಕಾಲ ತುಳಿತಕ್ಕೆ ಸಿಲುಕಿ ಮೇಲೆದ್ದು ತೆವಳುವಂತೆ ತನ್ನನ್ನು ತಾನೇ ಕಂಡ. ಆ ಮಹಾ ಪಕ್ಷಿ ಮೋಡಗಳ ಬಡಿದು ಪುಡಿಮಾಡಿ ಮಳೆಯಾಗಿ ಧಾರಾಕಾರವಾಗಿ ಜಲ ಉಕ್ಕುವಂತೆ ಮಾಡುತ್ತಿರುವುದನ್ನೆಲ್ಲ ಯಾವುದೋ ಮರದ ತುದಿ ಏರಿ ಅದೂ ನೀರಲ್ಲಿ ಮುಳುಗಿರುವಾಗ ಅದರ ಯಾವುದೋ ದುರ್ಬಲ ಕೊಂಬೆಯೊಂದ ಹಿಡಿದು ಕೂಗುತ್ತಿರುವಂತೆ ಅಸಾಧ್ಯ ಚಿತ್ರಗಳು ತುಂಬಿಕೊಂಡು. ಆ ಪ್ರಳಯ ಪಕ್ಷಿಯ ಬೆನ್ನಟ್ಟಿ ಅದನ್ನು ಹಿಡಿಯುವ ದುಸ್ಸಾಧ್ಯ ಸಾಹಸ ಮಾಡುತ್ತ ಅಪ್ಪ ಅದರ ನೆರಳ ಹಿಂದೆಯೇ ಓಡುತ್ತ ಬಿರುಗಾಳಿಯ ಅಲೆಗಳನ್ನು ತನ್ನ ತೋಳುಗಳಿಂದ ತಿವಿದು ಮುನ್ನುಗ್ಗುತ್ತ 'ನಿಲ್ಲು ಹುಂಜವೇ ನಿಲ್ಲು' ಎಂದು ಕೂಗುತ್ತಿರುವಂತೆ ಕೇಳಿಸಿತು.

ಇದ್ದಕ್ಕಿದಂತೆ ಅಪ್ಪ ಪಕ್ಷಿಯ ಬೆನ್ನ ಮೇಲೆ ಕುಳಿತಿರುವಂತೆ ಕಂಡು ರಾಜ ಬೆಚ್ಚಿಹೋದ. ಅಪ್ಪನೇ ಪಕ್ಷಿಯೋ, ಪಕ್ಷಿಯೇ ಅಪ್ಪನೋ ತಿಳಿಯದಾಯಿತು. ಛಿದ್ರತೆಯ ಸಾಕ್ಷಾತ್ಕಾರವೆಂಬಂತೆ ಆ ಪಕ್ಷಿ ಎಲ್ಲವನ್ನೂ ತಿನ್ನುತ್ತಿತ್ತು. ಆ ಕನಸಿನಲ್ಲಿ ಅಪ್ಪ ತನ್ನನ್ನು ಕಾಗಿ ಹೂಂಕರಿಸಿ ಬಾ ಎಂದಂತೆ ಕೇಳಿಸಿ ಆ ಹಕ್ಕಿಯೂ ತನ್ನತ್ತಲೇ ಬರುತ್ತಿರುವದನ್ನು ಕಂಡಂತಾಗಿ ಕಿಟಾರನೆ ಚೀರಿಕೊಂಡು ಮೇಲೆದ್ದ. ಪ್ರಳಯ ಪಕ್ಷಿ ನಾಳೆ ಬರುತ್ತೇನೆ ಎಂಬಂತೆ ಕನಸ ಆಕಾಶದಲ್ಲಿ ಮಾಯವಾಯಿತು."

**ತೋಪು**

"ಯಾವಾಗಲೂ ಒಮ್ಮೆ ನಮ್ಮ ಆ ಸ್ಮಶಾನದ ಬಗ್ಗೆ ಒಂದು ಕೆಟ್ಟ ಕನಸು ಕಂಡಿದ್ದೆ. ಆಗ ಬಹಳ ಭಯವಾಗಿತ್ತು. ಹೀಗೆ ಒಂದು ರಾತ್ರಿ ಆ ಸ್ಮಶಾನದಲ್ಲಿ ಇದ್ದ ಸುಂದರ ತಾವರೆ ಕೊಳದ ತುಂಬ ನೆತ್ತರ ನೀರು ತುಂಬಿಹೋಗಿತ್ತು. ಈ ಹಿಂದೆ ಆ ಪನ್ನೀರ ಕೊಳದಲ್ಲಿ ಗಂಟೆಗಟ್ಟಲೆ ನಾನು ಅವಮಾನದ ಹಸಿವಿನ ಕ್ಷಣಗಳ ಹೇಳಿಕೊಂಡು ಮೌನವಾಗಿ

ರೋಧಿಸುತ್ತಾ ಕುಳಿತು ಬಿಡುತ್ತಿದ್ದೆ. ಅಂತಹ ಆ ಒಂದು ಕೊಳದಲ್ಲಿ ಹಳದಿ, ಬಿಳಿ, ಕಂದು, ಕೆಂಪು ವರ್ಣದ ತಾವರೆ ಮೊಗ್ಗುಗಳು ಮಕ್ಕಳ ಕೈಗಳಂತೆ ಮೇಲೆದ್ದು ಬಂದು ಕೈಬೀಸಿ ಕರೆಯುತ್ತಿದ್ದವು. ಆ ತರದ ಪುಷ್ಕರಣಿಯ ತುಂಬ ನೆತ್ತರಂತಹ ನೀರಿದೆ ಎಂದರೆ ನನ್ನ ಹೃದಯ ಒಡೆದು ಹೋದಂತಾಗಿತ್ತು.

ಕರ್ಕಸವಾಗಿ ಯಾರೋ ಮಹಾ ಅಧಿಕಾರಿ ವರ್ಗದವರು ಹದ್ದಿನಂತೆ ಕೂಗುತ್ತಾ ಬಾಯಿ ತೆರೆದು ಕೋರೆಹಲ್ಲುಗಳ ಝಳಪಿಸಿದಂತಾಗಿ ಆ ಕನಸಿನ ದವಡೇ ಹಲ್ಲಿಗೆ ಸಿಲುಕಿ ಜಜ್ಜಿ ಹೋದಂತಾಗಿ ಎಚ್ಚರವಾಗಿ ಕೂಗಿಕೊಂಡಿದ್ದೆ."

ಹೀಗೆ ನಿಯಂತ್ರಣಕ್ಕೆ ಸಿಗದಿರುವ ಕನಸುಗಳ ಮೂಲಕ ಮುಂದೆ ನಡೆಯುವ ದುರಂತವನ್ನು ಚಿತ್ರಿಸುತ್ತಾರೆ. ಕಾಳಗದ ಹುಂಜ, ತೋಪು ಈ ಎರಡು ಕಥೆಗಳಲ್ಲಿ ಬರುವ ಕನಸುಗಳು ರಾಜುವಿನ ಬದುಕು ತಲುಪು ದುರಂತವನ್ನು, ತೋಪು ಅಧಿಕಾರಿಗಳ ಕೈಗೆ ಸಿಕ್ಕಿ ನಾಶವಾಗುವುದನ್ನು ಕನಸಿನಲ್ಲಿ ರೂಪಕವಾಗಿ ಬಳಸಿ ಕೊಂಡು ನಿರುಪಿಸುತ್ತಾರೆ.

"ವಾಸ್ತವವಾದಿ ಬರವಣಿಗೆಯ ಕ್ರಮದಲ್ಲಿ ವಾಸ್ತವದ ಕಠೋರತೆಯನ್ನು ಮೀರಲು ಕಟ್ಟಿಕೊಂಡ ಪ್ರಕ್ರಿಯೆಯೊಂದನ್ನು ಕನಸಿನ ವಾಸ್ತವದಲ್ಲಿ ಸಾಧ್ಯವಾಗದ ಆಶಯಗಳು ಅತ್ಯಂತ ಪರಿಣಾಮಕಾರಿಯಾಗಿ ಮೂಡಿಬರುತ್ತದೆ. ಮನುಷ್ಯನಿಗೆ ವಾಸ್ತವದಲ್ಲಿ ಸಾಧ್ಯವಾಗದ ಆಶಯಗಳು ಕನಸಲ್ಲಿ ಕೈಗೂಡುತ್ತವೆ.

ಇದಕ್ಕೆ ನಿದರ್ಶನವಾಗಿ ಮೊಗಳ್ಳಿಯವರ ಭೂಮಿಕಥೆಯನ್ನು ನೋಡಬಹುದು.

"ಮತ್ತದೇ ಆಕಾಶ ತನ್ನೆಲ್ಲ ನಕ್ಷತ್ರಗಳ ಸಾಕ್ಷಿಯಲ್ಲಿ ರಾತ್ರಿಯ ಕತ್ತಲನ್ನು ಜಗಿಯುತ್ತಿತ್ತು. ಎಂದಿನಂತೆಯೇ ನೀರವತೆಯ ಆಕಳಿಕೆಯಲ್ಲಿ ಕೇರಿ ತೂಕಡಿಸುತ್ತಿತ್ತು. ಯಾವತ್ತು ಮುಗಿಯದ ಅತಂತ್ರಗಳ ಅಲೆಗಳ ಮೇಲೆ ಕಲ್ಪನೆಯ ದೋಣಿ ಕಟ್ಟಿ, ಅದರಲ್ಲಿ ಕುಳಿತು ನಾವೆಲ್ಲ ತೇಲಿ ತೇಲಿ ದೂರ ದೂರಕ್ಕೆ ಹಾರಿಹೋಗುತ್ತಿದ್ದೆವು. ಅದೇ ಹಳೆಯ ಕಾಲದ ನಮ್ಮ ಪೂರ್ವಿಕರ ಕತೆಯನ್ನು ನಮ್ಮ ತಾತ ದಣಿದ ತನ್ನ ಕಾಲಾಂತರದ ಸ್ವರದಲ್ಲಿ ನಿಧಾನಕ್ಕೆ ಹೇಳುತ್ತಿದ್ದ. ಭೂಮಿತಾಯಿ ನಮ್ಮನ್ನೆಲ್ಲ ತನ್ನ ಹೊಟ್ಟೆಯ ಮೇಲೆ ಮಲಗಿಸಿಕೊಂಡು, ಗಾಳಿ ಬೀಸಿದ ಜೊಗುಳ ಹಾಡಿಸಿದಂತೆ ಏನನ್ನೋ ಆಲೋಚಿಸುತ್ತಿದ್ದಳು. ನಾವೆಲ್ಲ ಹಿಂಡು ಬಳಗದ ಹೈಕಳು ನಮ್ಮ ಪೂರ್ವಿಕರ ಕನಸ್ಸನ್ನು ಮನಸ್ಸಿಗೆ ಬಿತ್ತಿಕೊಂಡು ಆಲಿಸತೊಡಗಿದೆವು"

ಕಥೆಯ ಆರಂಭವೇ ಇಂತಹದೊಂದು ಕನಸನ್ನು ಮನಸ್ಸಿಗೆ ಬಿತ್ತಿಕೊಂಡು ಆಲಿಸತೊಡಗಿರುವುದರ ಕ್ರಿಯೆಯನ್ನು ಹೇಳುತ್ತದೆ. ಶತ ಶತಮಾನಗಳಿಂದಲೂ ದಮನಕ್ಕೆ ಒಳಗಾದ ದಲಿತ ಜಗತ್ತನ್ನು ತನ್ನೆಲ್ಲಾ ನೋವು ನಲಿವುಗಳನ್ನು ಇಂತಹ ಕನಸಿನ ವಾಸ್ತವದ ಮೂಲಕವೇ ನಿರಾಳವಾಗುತ್ತದೆನ್ನುವ ಅಂಶ ಇಲ್ಲಿ ಸ್ಪಷ್ಟವಾಗುತ್ತದೆ. ಇಂತಹ ಈ ಕನಸಿನ ಜಗತ್ತು ತಾಯ್ತನದ ಅಕ್ಕರೆಯದೆಂದೂ ಹೇಳಬಹುದಾಗಿದೆ." (ಗಂಜ್ಯಾಳ ಬೋರಮ್ಮ ಬಸಂತ್ರಾಯ : ಮೊಗಳ್ಳಿ ಕಥನ : ದಲಿತತ್ವದ ಶೋಧ ಪುಟ ೪೭).

# ಅಧ್ಯಾಯ ಐದು

## ಜಾನಪದದ ಪ್ರಸ್ತುತತೆ

'ಜನಪದ' – 'ಜಾನಪದ' ಈ ಎರಡು ಪರಿಕಲ್ಪನೆಗಳು ಒಂದು ಜನಾಂಗದ ಅಭಿವ್ಯಕ್ತಿ ಕ್ರಿಯೆಯನ್ನು ಮೌಖಿಕ ಮಹತ್ವವನ್ನು ನೀಡುತ್ತವೆ. 'ಜನಪದ' ಎನ್ನುವುದು ಒಂದು ಸಮುದಾಯದ ಅಭಿವ್ಯಕ್ತಿ – ಜನಜೀವನದ ಚಿತ್ತಾರದ ಚಿಂತನೆಯ ಮೌಖಿಕ ಸಂಪ್ರದಾಯ. ಜಾನಪದ ಸಾಮಾಜಿಕವಲಯದ ಕ್ಷೇತ್ರೀಯ ಅಭಿವ್ಯಕ್ತಿ ಪ್ರಕ್ರಿಯೆ. ಒಂದು ಕಾಲದ ಧರ್ಮ ಚಿಂತನೆಯೆ 'ಸಂಸ್ಕೃತಿ' ಯ ನೆಲೆ.

**ಪ್ರಸ್ತುತ ಸಂದರ್ಭದಲ್ಲಿ ಜಾನಪದೀಯತೆ**

ಜನಪದ > ಜಾನಪದ ; ಪ್ರತಿಯೊಂದು ಕಳೆದ ನಾಡಿನ ಜನತೆಯ ನೆನಪು ಮಾತುಕತೆ ನಡವಳಿಕೆ ಸಂಪ್ರದಾಯ ಮತ್ತು ಪಂಪರೆಯ ಚಿಂತನೆಗಳು ಯಥಾರ್ಥತೆಯಲ್ಲಿ ಅಭಿವ್ಯಕ್ತಿ ಕ್ರಿಯೆ. ಇದು ಮೌಖಿಕ ಸಂಪ್ರದಾಯದ ನೆಲೆಯನ್ನು ಪಡೆದಿರುವುದು. 'ಮಾತು' – ಎಂದು ಹೇಳಬಹುದಾದ ಮೌಖಿಕತೆಯ ಅಭಿವ್ಯಕ್ತಿ. 'ಮಾತು' ಕೇವಲ ಮಾತು ಎಂದಾಗಿ ಕೇಳಲು ಸಾಧ್ಯವಿಲ್ಲ. ಇಲ್ಲಿ ಮಾತು ಸಂಸ್ಕೃತಿಯ ಮಹತ್ವವನ್ನು ಪಡೆದಿರುವುದು. ಈ ಸಂಸ್ಕೃತಿಯಲ್ಲಿ 'ಹಾಡು – ಮಾತು' 'ಲಾವಣಿ' 'ಕಾವ್ಯ' 'ಕಥೆ' 'ಒಗಟು' 'ಗೀತೆ' ಹೀಗೆ ಅನೇಕಾನೇಕ ವಿಂಗಡನೆಗಳು ಪರಂಪರೆಯಿಂದ ಬೆಳೆದು ಬಂದದ್ದು. ಮನುಷ್ಯನಿಗೆ ಮಾತು ಎಂದು ಬಂದಿತೋ ಅಂದಿನಿಂದಲೇ ಸಾಹಿತ್ಯವು ಬಂದಿತು. ಹೀಗಾಗಿ 'ಮಾತು' ಸಾಹಿತ್ಯದ ಸಂಸ್ಕೃತಿಯಲ್ಲಿ ಒಂದು ಮಹತ್ವರವಾದ ಪಾತ್ರವಹಿಸಿ ಕೊಂಡಿದೆ. "ಸಂಸ್ಕೃತಿ ಎನ್ನುವುದು ಬದುಕಿನ ಕ್ರಿಯಾ ಸ್ವರೂಪ" – "ಸಾಹಿತ್ಯ ಎನ್ನುವುದು ಸಾಮಾಜಿಕ ಸಂಸ್ಥೆ" – ಈ ಎರಡೂ ಹೇಳಿಕೆಗಳನ್ನು ಅವಲೋಕಿಸಿದಾಗ ಮಾತು ಮತ್ತು ಬರಹಗಳ ನಡುವೆ ಕಂದರವಿದ್ದರೂ ಮೂಲಭೂತ ಸತ್ವ ಮತ್ತು ತತ್ವಗಳು ಸಮನಾಂತರತೆಯನ್ನು ಪಡೆದುಕೊಂಡಿರುತ್ತದೆ. ಕಾಲಧರ್ಮ – ಮನೋಧರ್ಮ, ಇತಿಹಾಸ, ಪುರಾಣ, ತತ್ವ ಚಿಂತನೆ, ನಂಬಿಕೆ, ಮೌಲ್ಯಗಳು, ಶಕುನ, ಕನಸು, ಆಶಯ, ಅನುಭವಿಕತೆ, ಪಾರಮಾರ್ಥಿಕತೆ, ಸಾಮಾಜಿಕ ಕ್ರಿಯೆಗಳು ಹೀಗೆ ಅನೇಕಾಂಶಗಳು ಮಾತು ಮತ್ತು ಬರಹದ ಕೃತಿಗಳಲ್ಲಿ ಸೇರ್ಪಡೆಗೊಂಡಿರುವುದು.

ಸಂಸ್ಕೃತಿ ಎನ್ನುವುದು ಬದುಕಿನ ಕ್ರಿಯೆ. ಹೀಗಾಗಿ ಜನಪದ ಕೇವಲ ಪೂರ್ವ ವಿಚಾರಗಳಿಂದ ಕೂಡಿದೆ ಎಂದು ಹೇಳುವುದಕ್ಕಿಂತ ಮಾನವನ ನಾಗರೀಕತೆಯಲ್ಲಿ ಬೆಸೆದುಕೊಂಡಿದೆ ಎನ್ನಬಹುದು. ಅಮೂರ್ತವಾಗಿದ್ದು ಕಾಲದಿಂದ ಕಾಲಕ್ಕೆ ಮಾನವನ ಬದುಕಿನಲ್ಲಿ ಹಾಸಿಹೊಕ್ಕಿದೆ. ಕೆಲವು ಸಂದರ್ಭಗಳಲ್ಲಿ ಬದಲಾವಣೆಯುಕಂಡು ಬರುವುದು. ಬದಲಾವಣೆ ಎನ್ನುವುದು ಜೀವಂತಿಕೆಯ ಸಂಕೇತವಾಗಿದೆ.

ಎಂಥಹ ಶಿಷ್ಟ ಸಾಹಿತ್ಯವೆಂದರೂ ಕೂಡ ಅದರಲ್ಲಿ ಜನಪದ ಸೊಗಡು ಮಣ್ಣಿನ ವಾಸನೆಯಿಂದ ಕೂಡಿರುತ್ತದೆ. 'ಜನಪದ' – ಬಿಟ್ಟು ಯಾವುದೇ ಶಿಷ್ಟಸಾಹಿತ್ಯವಿರಲು ಸಾಧ್ಯವೇಯಿಲ್ಲ. ಅದಕ್ಕೆ ಕಾರಣವೆಂದರೆ ವಾಸ್ತವ; 'ಬದುಕು' 'ಜೀವನ'– ಚಾಲನೆಯ ಕ್ರಿಯೆ. ಹೀಗಾಗಿ ಮಾತು – ಬರಹ ಜನಪದ > ಶಿಷ್ಟ ಸಾಹಿತ್ಯ ಒಂದು ಒಂದಕ್ಕೆ ಪೂರಕವಾಗಿರುವುದು. ಉದಾಹರಣೆ :– 'ರಾಮಕಥಾ ಪುಂಜ' – ಎಂಬ ಲಾವಣಿ/ ಹಾಡುಗಬ್ಬವು 'ಪ್ರತಿಭಾವಂತ' ಮನಸ್ಸಿಗೆ ತಲುಪಿ ಅದರಿಂದ ಶ್ರೇಷ್ಠಕೃತಿ ಹೊರಹೊಮ್ಮಿರುವುದು ಮಾತ್ರವಲ್ಲ 'ಸಂಸ್ಕೃತಿ'ಯನ್ನೇ ದಾಖಲುಗೊಳಿಸಿದೆ. ಅಂದರೆ ಶಿಷ್ಟಸಾಹಿತ್ಯವೆಂಬುದು 'ದಾಖಲೆ'ಗೊಳ್ಳುವ ಕ್ರಿಯೆಯಾಗಿದ್ದು – ಜನಪದ – ವಾಚಕವಾಗಿ ಹರಿಯುವುದು. ನೆಲೆಗಳು ಬೇರೆ ಬೇರೆಯಾಗಿದ್ದರು ಆಶಯಗಳು ಒಂದೇ.

ಇಂದಿನ ಸಂದರ್ಭದಲ್ಲಿ 'ಜನಪದ' ಎಂದು ಹೇಳುವ ಗ್ರಾಮೀಣ ಸಂಸ್ಕೃತಿಯ ಅಧ್ಯಯನ ಎಷ್ಟರಮಟ್ಟಿಗೆ ಸಮಂಜಸವೆಂಬುದು ಕಳೆದು ಹೋದ, ಹೋಗುತ್ತಿರುವ ಸಂಸ್ಕೃತಿಯ ಚಿಂತನೆಗಳನ್ನು ಮೌಖಿಕ ಸಂಪ್ರದಾಯದ ಅಭಿವ್ಯಕ್ತಿ ಜ್ಞಾನವಾಹಕವನ್ನು ತಡೆ ಹಿಡಿದು ನಿಲ್ಲಿಸಿ ಅದರ 'ಸಾರ'ವನ್ನು ಅರ್ಥೈಸಿಕೊಳ್ಳವ ಜೀವಂತಿಕೆಯ ಚಿಂತನೆಗಳು 'ಇತ್ತು' ಎಂಬುದನ್ನು ತಿಳಿದುಕೊಳ್ಳುವುದಷ್ಟೇ ಅಲ್ಲ. ಅದನ್ನು ಉಳಿಸಿಕೊಳ್ಳವುದು, ಒಂದಾದರೂ ಇಂದು ಜೀವಂತವಾಗಿಯೇ ಇದೆ ಎಂಬುವುದನ್ನು ದಾಖಲು ಗೊಳಿಸುತ್ತಿರುವ ಬರಹ ಮಾಧ್ಯಮ ಅಭಿವ್ಯಕ್ತಿಕ್ರಿಯೆ. ಹೀಗಾಗಿ ಜನಪದ ಸಾರ್ವಕಾಲಿಕ ಸತ್ಯದರ್ಶನವನ್ನು ನೀಡುತ್ತದೆ ಎಂಬುದನ್ನು ಒಪ್ಪಬಹುದು. ಉದಾಹಾರಣೆ :– ಕುವೆಂಪು ಅವರ 'ಮಲೆಗಳಲ್ಲಿ ಮದುಮಗಳು' ತೇಜಸ್ವಿಯವರ ಕಿರುಗೂರಿನ ಗೈಯಾಳಿಗಳು, ಕರ್ವಾಲೋ. ಹೀಗೆ ಆಧುನಿಕ ಸಾಹಿತ್ಯ ಪಂಥಗಳು ದೇಶಿಯತೆಯನ್ನು ಉಳಿಸಿಕೊಂಡು, ಬೆಳೆಸುವ ನಿಟ್ಟಿನತ್ತ ಹೆಜ್ಜೆ ಹಾಕಿದೆ.

ಶಿಷ್ಟ ಸಾಹಿತ್ಯದ- ಬರಹ ಸಾಹಿತ್ಯದ ಹಂತಗಳಂತೆ ಜನಪದದಲ್ಲಿಲ್ಲ. ಭಾಷೆ ಚರಿತ್ರೆಯನೆಲೆಯಿಂದ, ಕಾಲದನೆಲೆಯಿಂದ ವಿಂಗಡನೆ ಮಾಡಿಕೊಂಡದ್ದು, 'ಧರ್ಮ'ದ ಜಿಜ್ಞಾಸೆಯ ಆಧಾರದಿಂದ ವಿಂಗಡಿಸಿಕೊಂಡಿರುವುದು ಸರಿಯಷ್ಟೆ. ಪ್ರಾಚೀನ ಕನ್ನಡ, ನಡುಗನ್ನಡ, ಆಧುನಿಕ ಕನ್ನಡ ನವೋದಯ, ನವ್ಯ ಪ್ರಗತಿಶೀಲ ನವ್ಯೋತ್ತರ ವೆಂಬ ವಿಂಗಡನೆಗಳು ಏನೇ ಆಗಿದ್ದರೂ 'ಜನಪದರಲ್ಲಿ'ನ ಬೇರು ಆ ಬೇರಿನ ಸಾರವು ಎಲ್ಲಾ ಹಂತದ ಸಾಹಿತ್ಯ ಕೃತಿಗಳಲ್ಲಿ ಗುರುತಿಸಬಹುದು. ಬೇರಿಲ್ಲದೆ ಮರಬೆಳೆಯಲಾರದು ಎಂಬಂತೆ ಜನಪದವಿಲ್ಲದೆ ಶಿಷ್ಟ ಸಾಹಿತ್ಯ ಬೆಳೆಯಲಾರದು ಎಂಬುವುದನ್ನು ಇತಿಹಾಸ ದೃಷ್ಟಿಯಿಂದ ಗುರುತಿಸಬಹುದು.

ವೈಜ್ಞಾನಿಕ ಯುಗ. ತಂತ್ರಜ್ಞಾನ, ಮಾಹಿತಿಜ್ಞಾನ ವಿಜ್ಞಾನದಯುಗದಲ್ಲಿ ಜಾಗತೀಕರಣದ ಜಗತ್ತಿನಲ್ಲಿ ಈ ಜನಪದ – ಜನಪದ ಸಾಹಿತ್ಯದ ಅಭಿವ್ಯಕ್ತಿ, ಅಧ್ಯಯನ, ಚರ್ಚೆ, ವಿಮರ್ಶೆ ಹಾಗೂ ಸಂರಕ್ಷಣೆ ಕಾರ್ಯದ ಅಗತ್ಯ ಮತ್ತು ಅನಿವಾರ್ಯತೆಯ ಬಗ್ಗೆ ಆಲೋಚನಿಸುವುದು ಅಗತ್ಯವೆನಿಸುವುದು. ಅಷ್ಟೇ ಅಲ್ಲ ಜೀವಂತ ಸಾಹಿತ್ಯ ಇಂದು ಬೆಳವಣಿಗೆಯಲ್ಲಿ ಮಹತ್ವದ ಪಾತ್ರವಹಿಸಿ ಕೊಂಡಿರುವುದು. ಹೇಗೆಂದರೆ ನವ್ಯೋತ್ತರ ಸಾಹಿತ್ಯ ಘಟ್ಟ ಎಂದೂ ಗುರುತಿಸುವ ದಲಿತ ಮತ್ತು ಬಂಡಾಯ ಹಂತಗಳು ಮಾಲತಃ ಜನಪದೀಯವೇ ಮೌಖಿಕ ಸಂಪ್ರದಾಯವೇ ಅವರ ಜೀವಾಳ, ಬೇರು- ವಸ್ತು ಭಾಷೆ ಭಾಷಾ ಪ್ರಯೋಗತೆ, ಶಬ್ದಗಳ ಅರ್ಥಪ್ರತೀತಿ ಹೀಗೆ ಯಾವುದೇ ಆಡಂಬರವಿಲ್ಲದೆ ಸಹಜ ಹೃದಯವಂತಿಕೆಯ ಸಾಂಸ್ಕೃತಿಕ ಅಭಿವ್ಯಕ್ತಿಯಾಗಿದೆ.

ಸಾಹಿತ್ಯಾಭಿವ್ಯಕ್ತಿಯ ರಾಯಭಾರಿ ಎಂದರೆ ಜನಪದ. ಜನಪದದಿಂದ ಶಿಷ್ಟ ಸಾಹಿತ್ಯ ಪ್ರಯೋಗಶೀಲ ಪ್ರವೃತ್ತಿಯಾಗಿದ್ದು ಕಾಲದಿಂದ ಕಾಲಕ್ಕೆ ವಸ್ತು, ಭಾಷೆ, ಶೈಲಿ, ತಂತ್ರ, ಧರ್ಮ, ಸಾಮಾಜಿಕತೆ, ಮೌಲ್ಯ, ಸಂಸ್ಕೃತಿಯ ಚಿಂತನೆಗಳು, ವಾಸ್ತವ ಅವಾಸ್ತವ ಕಲ್ಪನೆ, ಕವಿಮನೋಧರ್ಮ, ಕಾವ್ಯಧರ್ಮ, ಧಾರ್ಮಿಕಧರ್ಮ, ಅನುಭವ, ಅನುಭಾವ, ಪಾರಮಾರ್ಥಿಕತೆ ಹೀಗೆ ಅನೇಕಂಶಗಳಿಂದ ವಿಭಿನ್ನತೆಯ ನೆಲೆಯನ್ನು ರೂಪಿಸಿರುತ್ತದೆ. ಈ ಅಂಶಗಳು ಎರಡು ಸ್ಥರಗಳಲ್ಲಿಯೂ ಕಂಡು ಬರುವುದು. ಮೌಖಿಕತೆ – ವ್ಯಕ್ತಿಯಿಂದ ವ್ಯಕ್ತಿಗೆ ವರ್ಗಾವಣೆಯಾಗುವುದು ಅಂದರೆ ವೇದ ಸಂಸ್ಕೃತಿಯು ಹೇಗೆ ಕಂಠಸ್ಥ ಸಂಪ್ರದಾಯ ಪಡೆದಿದೆಯೋ ಹಾಗೆ 'ಜನಪದ'ವೂ ಕೂಡ. ಇಲ್ಲಿ ವರ್ಗ – ವರ್ಣಗಳ ನೆಲೆಗಳು ಗೋಚರಿಸುವುದು. ವೇದ ಸಂಸ್ಕೃತಿಯ ಸ್ವರೂಪವು ಶಿಷ್ಟ – ಬ್ರಾಹ್ಮಣ ನಾಗರೀಕತೆಯ ನೆಲೆ

ಹೊಂದಿದ್ದರೆ, ಅಂತ್ಯಜ, ಪಂಚಮ, ಶೂದ್ರ, ಗ್ರಾಮೀಣ ಸಂಸ್ಕೃತಿಯ ನಾಗರಿಕತೆಯ ನೆಲೆ ಹೊಂದಿರುತ್ತದೆ. ಪ್ರತಿಭೆ, ಸ್ಫೂರ್ತಿಕಲ್ಪನೆ ಅಷ್ಟದಳ ವರ್ಣನೆ ಅನ್ನುವ ಅನೇಕ ಕಾವ್ಯತತ್ವಗಳಿಂದ ಕೂಡಿದ. ಧಾರ್ಮಿಕ ಕಾವ್ಯಗಳು 'ನಿಯಮ ಬದ್ಧ ರಚನೆ'ಯಾಗಿದ್ದು, ಮೌಖಿಕ ಗ್ರಾಮೀಣ ಸಂಸ್ಕೃತಿಯ ಹಾಡುಗಬ್ಬಗಳು, ಕಾವ್ಯಗಳು ಸಂಚಾರಿಗಾಯಕರು, ಪದಗಳನ್ನು ಹಾಡುವ ಗಾಯಕರು ಕೂಡ 'ಶಿಷ್ಟತೆ' – ರಚನಾಕಾರರು– ಕಾವ್ಯತತ್ವಗಳ ಕ್ರಮಬದ್ಧತೆ ಇರಲೇಬೇಕೆಂಬ ನಿಯಮವಿಲ್ಲದೆ ಇದ್ದರು ಆ ತತ್ವ ಸಿದ್ಧಾಂತಗಳು ಸೃಜನಶೀಲತೆಯ ಕ್ರಿಯೆಯಲ್ಲಿರುತ್ತದೆ. ಕಥಾತ್ಮಿಕತೆಯಿಂದ ಕೂಡಿದ ಜನಪದ ಮಹಾಕಾವ್ಯ 'ಮಲೆಮಹದೇಶ್ವರ' 'ಮಂಟೇಸ್ವಾಮಿಯ ಕಥಾಪ್ರಸಂಗ' – ಹಲವಾರು ಕಥೆಗಳಿಂದ ಪವಾಡಗಳಿಂದ ಕನಸು ಕಲ್ಪನೆ ತತ್ವ ದರ್ಶನ ಅನುಭವ ಅನುಭಾವಿಕ ಪಾರಾಮಾರ್ಥಿಕತೆ ಹೀಗೆ ಪ್ರಾಚೀನ ಜನಪದಲ್ಲೂ ಇಂದಿನ ಜನಪದೀಯತೆಯ ಕಥೆ, ಕಾದಂಬರಿ, ನಾಟಕಗಳಲ್ಲೂ ಹಾಸು ಹೊಕ್ಕಾಗಿರುವುದನ್ನು ಕಾಣಬಹುದು.

ಮೂಲ ಜನಪದೀಯ ಸಂವೇದನೆಗಳು ಅಭಿವ್ಯಕ್ತಿ ಕ್ರಮಗಳ ಬಗ್ಗೆ ಚಿಂತನೆಗಳು ನಡೆಯಬೇಕಾಗಿದ್ದು ಮಾನವ ಸಂಸ್ಕೃತಿಯ ಸಂಪನ್ಮೂಲತೆಯ ಸೊಗಡನ್ನು ಬೆಳಕಿಗೆ ತರುವ ಕಾರ್ಯವು ಜನಪದ ಸಂಕಲ್ಪಗಾರರು ನೆಡೆಸಿರುವುದು. (ಹೆಚ್.ಎಲ್. ನಾಗೇಗೌಡರೂ ಜವರೇಗೌಡ, ಕರೀಂಖಾನ್.......ಅನೇಕರು)

ಒಂದು ಕಾಲದ ಅಭಿವ್ಯಕ್ತಿಯ ಕ್ರಿಯೆಯಲ್ಲಿ ಆ ಕಾಲದ ಮನೋಧರ್ಮ್ಮಗಳ ಚಿಂತನೆಗಳು ಕೂಡಿದ್ದು, ಆ ಕಾಲಕ್ಕೆ ಅದು ಪ್ರಸ್ತುತವಾಗಿರುತ್ತದೆ. ಅಂತೆಯೇ ಇಂದು – ಇಂದಿನ ಸಂದರ್ಭದ 'ಸಾಹಿತ್ಯ'– ಜನಪದೀಯತೆಯ ಅಭಿವ್ಯಕ್ತಿಯ ಗ್ರಾಮೀಣ ಪರಿಸರದ ಚಿಂತನೆ ಯಥಾರ್ಥತೆಯ ಚಿತ್ರಣ.

ಸ್ವಾತಂತ್ರ್ಯ ಬಂದದ್ದು ಸಮಾನತೆಯ ತತ್ವದ ಅಡಿಯಲ್ಲಿ 'ಜಾತೀ'ಯಂಬುದು ಇಲ್ಲವೆಂಬ ವರ್ಗ – ವರ್ಣಗಳ ನಿಯಮಗಳಿಂದ ಹೊರ ಬಂದ ಹೊಸ ಸಂಸ್ಕೃತಿಯು 'ಸಂಸ್ಕೃತೀಕರಣ'ಕ್ಕೆ ಗುರಿಯಾಗಿದ್ದರೂ ಕರ್ನಾಟಕದ ಅನೇಕ ಗ್ರಾಮೀಣ ಪರಿಸರವು 'ಹಿಂದಿನ' ಮೂಲ್ಯಗಳಲ್ಲಿಯೇ ಉಳಿದುಕೊಂಡು ಬಂದಿರುವುದು ದಲಿತ ಸಂವೇದನಾಭಿವ್ಯಕ್ತಿಯ ಕ್ರಿಯೆಗಳಲ್ಲಿ ಗುರುತಿಸಬಹುದಾಗಿದೆ.

ಗ್ರಾಮೀಣ ಜಗತ್ತು ಎಂದರೆ, ಒಂದು ಊರು ಒಂದು ಹಳ್ಳಿ, ಒಂದು ಕೇರಿ, ಜಾತಿಗೆ ಒಂದು ಕೇರಿ, ದೇವರು ಅಲ್ಲದೆ ದೇವತೆ, ಊರು ಹಬ್ಬ, ಜಾತ್ರೆ, ಅಲ್ಲಿಯ ಆಚರಣೆ, ನಂಬಿಕೆ, ಶ್ರದ್ಧೆ, ಭಕ್ತಿ, ಸಾಮಾಜಿಕ ಬದುಕು, ಹುಟ್ಟು, ಸಾವು, ಮದುವೆ, ಸಂತತಿ, ಭಾವ ರಾಗ, ದ್ವೇಷ, ಕ್ರೌರ್ಯ, ಮತ್ಸರ, ಆಸೆ ನಿರಾಶೆ, ದುಃಖ, ನೋವು, ಅಳು, ಸಂತೋಷ, ಸಂಭ್ರಮ, ಗಂಡು ಹೆಣ್ಣುಗಳನಡುವೆ ಆಕರ್ಷಣೆ, ಕಂಡು ಕಾಣದಂತೆ ದೇಹದ ಹಸಿವುತೀರಿಸಿಕೊಳ್ಳುವ ಅತ್ಯಾಚಾರ, ನಿಯಮಗಳನ್ನು ಮಾರುವ, ಬದುಕು ಎಂದರೆ ಲೈಂಗಿಕತೆ ಎಂಬುದೆ ಮುಖ್ಯ ನೆಲೆ ವಂಚನೆ, ಮೂರು ನಾಲ್ಕು ಹೆಂಡತಿಯರು, ಸಾವು ಎಂದರೆ ಕೊಲೆ, ಆತ್ಮಹತ್ಯೆ, ಸ್ವರ್ಧೆ, ಸೋಲು, ಆತ್ಮಗೌರವ ಕಳೆದು ಕೊಂಡದ್ದು, ಗೆಲವು ಎಂದರೆ ಅಹಂ ಅಹಂಕಾರ ಗೌಡರ ದರ್ಪ ದಲಿತನ ಅಳಲು ದೈನ್ಯತೆ ಮಾನವೀಯ ಮೌಲ್ಯಗಳು ಶೂನ್ಯ ಕ್ರೌರ್ಯ ವಿಪರೀತ ಕೋಪ ಕ್ರಿಯೆಗೆ ಗುರಿ ಹೀಗೆ ಸಾಮಾಜಿಕತೆ ಎಂದರೆ ನಂಬಿಕೆ ಆಚರಣೆಗಳ ಕ್ರಿಯಾ ಸ್ವರೂಪ.

ಧಾರ್ಮಿಕ ಜಿಜ್ಞಾಸೆಯು ಕೆಲವು ಸಂತರು ಯತಿಗಳು ಅನುಭಾವಿಕರನ್ನು ನೆನೆಯುವುದು ಮಂಟೇಸ್ವಾಮಿ ನಾಗಲಿಂಗದೇವ ಶಿಶುನಾಳ ಷರೀಫ್ – ಹೀಗೆ..

ಪ್ರಸ್ತುತ ಸಂಸ್ಕೃತೀಕರಣದ ಸಂದರ್ಭದಲ್ಲಿ ಗ್ರಾಮೀಣ ಜಗತ್ತಿನ ಸಾಮಾಜಿಕ ದರ್ಶನವು ದಲಿತ ಸಂವೇದನೆ, ಬಂಡಾಯ ಧ್ವನಿ ಭಾಷೆಯ ರಚನೆ ಅಭಿವ್ಯಕ್ತಿಯಲ್ಲಿ ಸೇರ್ಪಡೆಗೊಂಡಿದೆ.

ಅಂದು ಮತ್ತು ಇಂದು ಭೂತಕಾಲ ವರ್ತಮಾನ ಕಾಲದಲ್ಲಿ ಮೌಲ್ಯಗಳ ವಿರೋಚಕತೆಗಳು ಬದಲಾವಣೆಗಳು ಆ ಕಾಲಧರ್ಮ ಮತ್ತು ಮನೋಧರ್ಮ ಹಾಗೂ ಕವಿ ಲೇಖಕರ ಆಶಯ ಧೋರಣೆ ಮುಂಬರುವ ಸಾಮಾಜಿಕ ಜಗತ್ತು ಹೇಗಿರಬೇಕೆಂಬ ಕಲ್ಪನೆ ಹೀಗೆ ಅನೇಕ. ವಿಜ್ಞಾನ ಬೆಳೆದಿದ್ದರೂ ನಮ್ಮ ಗ್ರಾಮೀಣ ಜಗತ್ತು ಬದಲಾವಣೆ ಆಗಬೇಕಾಗಿದೆ.

ಸಾಹಿತ್ಯಭಿವ್ಯಕ್ತಿಯ ಆಶಯಗಳು ವಾಸ್ತವತೆಯಲ್ಲಿ ಕ್ರೌರ್ಯ ಕ್ರಿಯೆಯಲ್ಲಿ ತೊಡಗಲು ಸಾಧ್ಯವೇ? ಸಾಹಿತ್ಯದಲ್ಲಿ ಚಿತ್ರಿತಗೊಳ್ಳುವ ಸಾಮಾಜಿಕ ಜಗತ್ತು 'ಇದೆ' 'ಇತ್ತು'ಗಳನ್ನು ಹಾಳುವುದರೊಂದಿಗೆ ಬದಲಾವಣೆಯ ಆಶಯವು ಕೆಲವು ಕಡೆಕಂಡು ಬರುವುದು.

ಆರ್ಥಿಕ ಸಾಮಾಜಿಕ ಧಾರ್ಮಿಕ ಬದಲಾವಣೆಗಳು ಬೇಕು. ಹುಟ್ಟಿನಿಂದ ಎಲ್ಲರು ಸಮಾನರೇ. ಅಂತೆಯೇ 'ಸಮಾನತೆ' ಬೇಕು. ಜಾತಿಯೆಂಬ ಕೆಟ್ಟ ಪದ್ಧತಿ ಕೆಟ್ಟ

ಆಚಾರಣೆಗಳು ಬೇಡ, ಆರ್ಥಿಕ ಸ್ವಾತಂತ್ರ್ಯ ಸ್ವಾವಲಂಬನೆಯ; ಸಮಾನತೆ– ಹೊಸ ಜಗತ್ತಿನ ಚಿಂತನೆಗಳು ಆಗಿವೆ. ಒಂದು ಹಳ್ಳಿ 'ಸಂಸ್ಕೃತಿ'ಗೊಂಡರೆ ದೇಶವೇ ಬದಲಾದಂತೆ ಅಂತೆಯೇ 'ಅಭಿವ್ಯಕ್ತಿ' ಎಂಬುದು ಕೂಡ ಪರೋಕ್ಷ ಹೋರಾಟದ ಕ್ರಿಯೆಯಾಗಿರುತ್ತೆ.

ಮಾತು ಮತ್ತು ಬರಹಗಳು ಪ್ರಸ್ತುತ ಸಂದರ್ಭದಲ್ಲಿ ಮುಖಾ–ಮುಖಿಯಾಗಿ ಸ್ವರ್ಧೆಯ ಕಣಕ್ಕೆ ಇಳಿದಿದೆ ಎಂದು ಹೇಳ ಬಹುದಾದರೂ ಶಿಷ್ಟಸಾಹಿತ್ಯದ ಮೆರಗು ಆಕರ್ಷಣೆಯಲ್ಲಿ ಬೆಸೆದುಕೊಂಡಿದೆ ಆದರೆ ಜನಪದ ತನ್ನ ವಾಸ್ತವತೆಯ ಪರಿಸರದಿಂದ ಸಂಸ್ಕಾರದಿಂದ ಕೊಡಿದೆ ಮಾತ್ರವಲ್ಲ ಅನುಕರಣಾ ಸಂಸ್ಕಾರ ಸಂಸ್ಕೃತಿಯಿಂದ ದುರವುಳಿದಿದೆ ಹೀಗಾಗಿ ಇಂದು ಅದರ ಅಧ್ಯಯನ ಅಗತ್ಯ ಕಾರಣ ವಾಸ್ತವತೆಯ ಸ್ವರೂಪ ಯಥಾರ್ಥತೆಯ ದಾಖಲು ಜೀವಂತ ಸಂಸ್ಕೃತಿಯ ಸ್ವರೂಪ ನೆಲೆ ಹೆಚ್ಚು ಆಕರ್ಷಕವಾದದ್ದು ಮತ್ತು ಹೆಚ್ಚು ಪರಿಣಾಮಕಾರಿಯಾದದ್ದು ಕೂಡ ಇರುವುದನ್ನು ಇದ್ದಂತೆಯೇ ಚಿತ್ರಿಸುವ ನೈಜ ಸಂಸ್ಕೃತಿಯ ನೆಲೆ ದಲಿತ ಮತ್ತು ಬಂಡಾಯ ಸಾಹಿತ್ಯದ ಧ್ವನಿ.

# ಅಧ್ಯಾಯ ಆರು

## ಮೊಗಳ್ಳಿಯವರ ಸಣ್ಣಕಥೆಗಳಲ್ಲಿ ಅವರ ಆಶಯ

ಮೊಗಳ್ಳಿ ಗಣೇಶ್ ಅವರು ತಮ್ಮ ಆಶಯಗಳನ್ನು ಕಥೆಯನ್ನಾಗಿಸಿದ್ದಾರೆ. ಆರ್ಥಿಕವಾಗಿ, ರಾಜಕೀಯ, ಸಾಮಾಜಿಕ ಬದಲಾವಣೆಯನ್ನು ಆಶಿಸುತ್ತಾರೆ. ಹಕ್ಕು ಅಧಿಕಾರ ಸಮಾನತೆ ಸ್ವತಂತ್ರದ ಕಡೆಗೆ ಅವರ ತುಡಿತವಿದೆ. ಮನುಷ್ಯನ ವ್ಯಕ್ತಿತ್ವ ವಿಕಸನಕ್ಕೆ ಪೋಷಕವಾಗಿರುವ ಜ್ಞಾನ, ವಿಜ್ಞಾನದ ಬೆಳವಣಿಗೆಯನ್ನು ಬಯಸುವ ಲೇಖಕರು ಸಹಜ, ನೈಜ್ಯ ಬದುಕಿನತ್ತ ಅವರ ಆಶಯವಿರುವುದನ್ನು ಗುರುತಿಸಬಹುದು.

ಸಮಸ್ಯೆಗಳಿಂದ ಮುಕ್ತವಾದ ಬದುಕಿನತ್ತ ಅವರ ಮನದ ಮಿಡಿತವಿದೆ. ಶತಮಾನಗಳಿಂದಲೂ ವಂಚನೆಗೆ ಒಳಗಾದ ಜನಾಂಗದವರ ಬದುಕು ಬದಲಾಗಬೇಕೆಂಬ ಬಯಕೆ ಇದೆ. ಆಧುನಿಕವಾಗಿ ಆಗುತ್ತಿರು ಅಭಿವೃದ್ದಿಯನ್ನು ಒಪ್ಪಿಕೊಂಡಿದ್ದಾರೆ. ಆಧುನಿಕತೆ ಬೆಳೆದ ಹಾಗೆ ಸೌಲಭ್ಯಗಳು ಹೆಚ್ಚುತ್ತಾ ಹೋಗಿ ಹಳ್ಳಿಯ ಪ್ರಗತಿಯುಂಟಾಗುತ್ತದೆ ಎಂಬುದು ಅವರ ಅಭಿಪ್ರಾಯ. ಹಳ್ಳಿಗಳು ಪ್ರಗತಿಯತ್ತ ಚಲಿಸಿದರೆ ಆಗ ಹಳ್ಳಿಯಲ್ಲಿರು ಅಸಮಾನತೆ, ಅನ್ಯಾಯ, ದಬ್ಬಾಳಿಕೆ, ಕ್ರೌರ್ಯಗಳೆಲ್ಲ ನಾಶವಾಗುತ್ತದೆ. ನಿರ್ಮಲವಾದಂತಹ ಬದುಕು ನಮ್ಮದಾಗುತ್ತದೆ ಎಂಬಂತಹ ಅನಿಸಿಕೆಗಳನ್ನು ಅವರ ಕಥೆಗಳ ಮೂಲಕ ವ್ಯಕ್ತ ಪಡಿಸುತ್ತಾರೆ.

ಆಧುನಿಕತೆಯನ್ನು ಬಯಸುವ ಅವರು ನಗರ ಬೆಳವಣಿಗೆಯನ್ನು ವಿರೋಧಿಸುತ್ತಾರೆ. ನಗರಗಳು ಬೆಳದಂತೆ ಹಳ್ಳಿಗಳ ನಾಶವಾಗುತ್ತದೆ. ನಗರಗಳು ಮನುಷ್ಯನ ನೆಮ್ಮದಿಯನ್ನು ಕಿತ್ತುಕೊಳ್ಳುವುದರ ಜೊತೆಗೆ ಅವುಗಳಿಂದಾಗಿ ಮತ್ತಷ್ಟು ಸಮಸ್ಯೆಗಳು ಉದ್ಭವಿಸಿ ಮನುಷ್ಯ ಸಮಸ್ಯೆಗಳ ಸುಳಿವಿನಲ್ಲೆ ತನ್ನ ಹಿಡಿಬದುಕನ್ನು ಕಳೆಯ ಬೇಕಾಗುತ್ತದೆ.

ನಗರಗಳ ಬೆಳವಣಿಗೆಯನ್ನು ವಿರೋಧಿಸುವುದರ ಜೊತೆಗೆ ಯಂತ್ರ ಜಗತ್ತು ಮತ್ತು ಕೈಗಾರಿಕೀಕರಣವನ್ನು ಕಥೆಗಾರರು ಬಯಸುವುದಿಲ್ಲ. ಜಗತ್ತು ಅಭಿವೃದ್ಧಿ ಹೊಂದುತ್ತಾ ಹೋದಂತೆ ಆರ್ಥಿಕವಾಗಿ, ರಾಜಕೀಯವಾಗಿ, ಸಾಮಾಜಿಕವಾಗಿ ಮುಂದುವರೆಯಲು ಅವಕಾಶ ಸಿಗುತ್ತದೆ. ಆದರೆ ಕೈಗಾರಿಕೆಗಳು ಬೆಳದಂತೆಲ್ಲ ಹಳ್ಳಿಗಳು ನಾಶವಾಗುತ್ತ ಹೋಗುತ್ತವೆ. ಹಳ್ಳಿಗಳ ನಾಶವೆಂದರೆ ಒಂದರ್ಥದಲ್ಲಿ ನಮ್ಮ ಸಂಸ್ಕೃತಿಯ ನಾಶ.

ಯಂತ್ರ ಜಗತ್ತು ಮತ್ತು ಕೈಗಾರಿಕೀಕರಣದಿಂದ ಮನುಷ್ಯನ ಬದುಕು ಯಾಂತ್ರಿಕವಾಗುತ್ತಾ ಹೋಗುತ್ತದೆ. ಬದುಕಿನ ಯಾವ ಸಂಬಂಧಗಳಿಗೂ ಅಲ್ಲಿ ಜಾಗವಿರುವುದಿಲ್ಲ. ಮನುಷ್ಯ ತನ್ನ ಬದುಕಿನಲ್ಲಿ ಯಾವ ಅನುಭವಗಳನ್ನು ಪಡೆಯಲಾರದ ಸ್ಥಿತಿಯನ್ನು ತಲುಪುತ್ತಾನೆ. ಅವನ ಬದುಕು ಯಂತ್ರದ ಹಾಗೆ ನಿರ್ಜೀವವಾಗುತ್ತಾ ಹೊಗುತ್ತದೆ. ಆಸೆ, ಕನಸುಗಳಿಲ್ಲದ ಜೀವನ ಅವನದಾಗುತ್ತದೆ. ಯಂತ್ರದ ಜೊತೆಯಲ್ಲೇ ದುಡಿಯುತ್ತಾ ತಮ್ಮ ಬದುಕನ್ನು ಯಂತ್ರಗಳ ಹಾಗೆ ನಡೆಸಬೇಕಾಗುತ್ತದೆ. ಐ.ಟಿ.ಬಿ.ಟಿ. ಕಂಪನಿಗಳನ್ನು, ಕಾಲ್ ಸೆಂಟರ್ ಉದ್ಯಮಗಳನ್ನು ಉದಾಹಾರಣೆಯಾಗಿ ತೆಗೆದುಕೊಳ್ಳ ಬಹುದು. ಐ.ಟಿ.ಬಿ.ಟಿ. ಕಂಪನಿಗಳು, ಕಾಲ್ ಸೆಂಟರ್ ಉದ್ಯಮಗಳು ಅಭಿವೃದ್ಧಿಯಾದಂತೆಲ್ಲ ಮನುಷ್ಯ ಆರ್ಥಿಕವಾಗಿ ಅನುಕೂಲಗಳನ್ನು ಪಡೆದುಕೊಳ್ಳುತ್ತಿದ್ದಾನೆ ನಿಜ, ಆದರೆ ಇವುಗಳಿಂದಾಗಿ ಮನುಷ್ಯನ ಬದುಕುವ ಕ್ರಮಗಳೇ ಬದಲಾಗುತ್ತ ಹೊಗುತ್ತಿದೆ. ನಿಸರ್ಗದ ನಿಯಮಕ್ಕೆ ವಿರುದ್ಧವಾಗಿ ಬದುಕನ್ನು ನಡೆಸುವ ಪ್ರಯತ್ನವನ್ನು ಮಾಡುತ್ತಿದ್ದಾನೆ.

ಕಾಲ್ ಸೆಂಟರ್ ಗಳಲ್ಲಿ ಕೆಲಸ ಮಾಡುವವರು ರಾತ್ರಿಪಾಳಿಯಲ್ಲಿ ಕೆಲಸ ಮಾಡಬೆಕಾಗಿದೆ ಹಾಗಾಗಿ ಅವರು ಅನಿವಾರ್ಯವಾಗಿ ಅದಕ್ಕೆ ಹೊಂದಿಕೊಳ್ಳ ಬೇಕಾಗಿದೆ. ಹಾಗೆ ಹೊಂದಾಣಿಕೆ ಮಾಡಿಕೊಳ್ಳುವಾಗ ತಮ್ಮ ದೇಹದ ಜೊತೆಯಲ್ಲೆ ಅವರು ಯುದ್ಧ ಮಾಡಬೇಕಾಗಿದೆ. ಹಗಲಿನಲ್ಲಿ ನಿದ್ದೆ ಮಾಡಿ ರಾತ್ರಿಯಲ್ಲಿ ಕೆಲಸ ಮಾಡುವುದರ ಮೂಲಕ ತಮ್ಮ ದೇಹವನ್ನು ದಂಡಿಸಿ ಕೊಳ್ಳುತ್ತಿದ್ದಾರೆ. ಇದರಿಂದಾಗಿ ಅವರ ಆರೋಗ್ಯದ ಮೇಲೆ ಭೀಕರವಾದಂತಹ ಪರಿಣಾಮ ಉಂಟಾಗುತ್ತದೆ. ಇದೇ ಮುಂದುವರಿಯುತ್ತಾ ಹೋದರೆ ಮುಂದೊಂದು ದಿನ ನಿಶಾಚರಿಗಳ ಸಂಖ್ಯೆ ಹೆಚ್ಚುತ್ತದೆ. ಆಗ ಬದುಕೆ ಬದಲಾಗುತ್ತದೆ.

ಕೇವಲ ಬದುಕಲ್ಲ ನಮ್ಮ ಸಂಸ್ಕೃತಿಯ ನಾಶವು ಆಗುತ್ತದೆ. ಕಾಲ್ ಸೆಂಟರ್‌ಗಳಲ್ಲಿ ಕೆಲಸ ಮಾಡುವವರು ಹೊರದೇಶದವರ ಜೊತೆ ವ್ಯವಹಾರವನ್ನು ಮಾಡಬೇಕಾದ ಅಗತ್ಯವಿದೆ. ಕಾಲ್ ಸೆಂಟರ್‌ಗಳು ಪ್ರಾರಂಭವಾಗಿರುವುದು ಹೊರದೇಶದಲ್ಲಿ ಇರುವವರ ಅಗತ್ಯಗಳನ್ನು ಇಲ್ಲಿಂದಲೆ ಪೂರೈಸುವ ಸಲುವಾಗಿ. ಅವರ ಜೊತೆಯಲ್ಲಿ ದೂರವಾಣಿಯ ಮೂಲಕ ಮಾತನಾಡಿ ಅವರ ಅಗತ್ಯಗಳನ್ನು ಕಂಡು ಕೊಂಡು ಪೂರೈಸುವುದಕ್ಕೆ. ಅವರ ಜೊತೆ ವ್ಯವಹಾರ ಮಾಡಬೇಕೆಂದರೆ ಅವರ ಸಂಸ್ಕೃತಿ ಅವರ ಆಚಾರಗಳ ಬಗ್ಗೆ ನಮಗೆ ಅರಿವಿರ ಬೇಕು. ಅಲ್ಲಿ ಕೆಲಸ ಮಾಡುವುವವರು ವಿದೇಶದ ಹೆಸರುಗಳನ್ನು ಕೆಲಸದ ನಿಮ್ಮಿತ ಇಟ್ಟುಕೊಳ್ಳ ಬೇಕಾಗುತ್ತದೆ. ದಿನ ವಿಡಿ ಆ ಹೆಸರಿನ ಮೂಲಕ ವ್ಯವಹರಿಸುವ ಕೆಲಸಗಾರರು

ಆ ಹೆಸರನ್ನೆ ತಮ್ಮ ನಿತ್ಯದ ಬದುಕಿನಲ್ಲಿ ಬಳಸಲು ಪ್ರಾರಂಭಿಸುತ್ತಾರೆ ಹೆಸರಿನ ಮೂಲಕ ಆದಂತಹ ಬದಲಾವಣೆ ಕೊನೆಗೆ ನಮ್ಮ ಸಂಸ್ಕೃತಿಯ ನಾಶದವರೆಗೂ ಹೋಗುತ್ತದೆ.

ಆಧುನಿಕ ಶಿಕ್ಷಣ ಪದ್ಧತಿಯನ್ನು ಕೂಡ ವಿರೋಧಿಸುತ್ತಾರೆ. ಶಿಕ್ಷಣ ಮೌಲ್ಯಯುತವಾಗಿದ್ದು ಮಾನವೀಯ ಸಂಬಂಧಗಳನ್ನು ಬೆಸೆಯುವುದರ ಕಡೆಗಿರ ಬೇಕು. ಆದರೆ ಇಂದಿನ ಶಿಕ್ಷಣ ಮನುಷ್ಯನಿಗೆ ಮಾನವೀಯ ಮೌಲ್ಯಗಳನ್ನು ಹೇಳಿಕೊಡುವುದರ ಬದಲಾಗಿ ಅವನನ್ನು ಅದರಿಂದ ದೂರ ಮಾಡುತ್ತಿದೆ. ಶಿಕ್ಷಣ ಇಂದು ಹಣ ಮಾಡಿಕೊಳ್ಳುವ ದಂದೆಯಾಗಿ ಪರಿವರ್ತನೆಯಾಗುತ್ತಿದೆ. ಆದ್ದರಿಂದ ಮನುಷ್ಯನ ವ್ಯಕ್ತಿತ್ವ ಬೆಳೆಸುವುದರ ಕಡೆಗೆ ಅದರ ಗಮನವಿರುವುದು ಬಿಟ್ಟು ಹಣ ಮಾಡಿಕೊಳ್ಳುವುದರ ಕಡೆಗೆ ಅದರ ಗಮನವಿದೆ.

ನಂಬಿಕೆ, ಸಂಸ್ಕೃತಿ, ಸಂಬಂಧಗಳು ಬೆಲೆಗಳನ್ನು ಕಳೆದುಕೊಳ್ಳುತ್ತಿರುವುದರ ಬಗ್ಗೆ ಕಳವಳವಿದೆ. ಕ್ರೌರ್ಯ ಸ್ವಾರ್ಥ ವಂಚನೆ ಮೋಸ ಅನ್ಯಾಯಗಳು ಅಳಿಯಬೇಕೆಂದು ಬಯಸುವ ಮೊಗಳ್ಳಿಯವರು ನಂಬಿಕೆ, ಸಂಸ್ಕೃತಿ ಸಂಬಂಧಗಳು ಉಳಿಯುವುದರ ಜೊತೆಗೆ ಬೆಳೆಯ ಬೇಕೆಂದು ಆಶಿಸುತ್ತಾರೆ. ಮೊಗಳ್ಳಿಯವರು ತಣಿಗೆ ತೋಪು ಯುದ್ಧಪಕ್ಷಿ ಶವಯಾತ್ರೆ ಮುಂತಾದ ಕಥೆಗಳನ್ನು ಉದಾಹರಿಸಬಹುದು.

ಯಂತ್ರಗಳಿಂದ ಮನುಷ್ಯನ ಕ್ರೌರ್ಯಗಳು ಹೆಚ್ಚುತ್ತಾ ಹೋಗುತ್ತದೆ ಎಂಬ ಗಾಂಧಿಯವರ ಅಭಿಪ್ರಾಯವನ್ನು ಮೊಗಳ್ಳಿಯವರು ಸಮರ್ಥಿಸುತ್ತಾರೆ. ಯಂತ್ರಗಳ ಅಭಿವೃದ್ಧಿ ನಗರಗಳ ಬೆಳವಣಿಗೆಯನ್ನು ಬಯಸುತ್ತದೆ. ನಗರಗಳು ಬೆಳೆದಂತೆ ಹಳ್ಳಿಗಳ ನಾಶದ ಜೊತೆಗೆ ಮನುಷ್ಯ ತನ್ನನ್ನು ತಾನೇ ನಾಶಮಾಡಿಕೊಳ್ಳುತಾನೆ. ಯಂತ್ರಗಳಿಂದಾಗಿ ನಮ್ಮ ಗುಡಿ ಕೈಗಾರಿಕೆಗಳು ಅಳಿವಿನ ಹಂಚನ್ನು ತಲುಪುತ್ತದೆ. ಗುಡಿ ಕೈಗಾರಿಕೆಗಳು ನಾಶವಾದರೆ ಗ್ರಾಮಗಳ ಜನರ ಬದುಕೇ ನಾಶವಾದಂತೆ.

ನಗರಗಳ ಅಭಿವೃದ್ಧಿಯೆಂದರೆ ಒಂದರ್ಥದಲ್ಲಿ ಮನುಷ್ಯನ ಕ್ರೌರ್ಯ, ಸ್ವಾರ್ಥ, ಅನ್ಯಾಯಗಳಿಗೆ ಅವಕಾಶ ಸಿಕ್ಕಂತೆ ನಗರಗಳ ಮೂಲಕ ಮನುಷ್ಯನ ಕೌರ್ಯ ಇನ್ನೂ ಹೆಚ್ಚ ತೊಡಗುತ್ತದೆ. ನಗರಗಳು ನಮ್ಮ ಸಂಸ್ಕೃತಿಯ ನಾಶಕ್ಕೆ ಕಾರಣವಾಗಿದೆ.

ಕಥೆಗಾರರು ತಮ್ಮ ಒಂದೊಂದು ಕಥೆಗಳಲ್ಲೂ ಒಂದೊಂದೊ ರೀತಿಯ ಆಶಯಗಳನ್ನು ವ್ಯಕ್ತಪಡಿಸುತ್ತಾರೆ. ಅವರ ಕಥೆಗಳು ಹೆಚ್ಚಾಗಿ ಗ್ರಾಮ ಜೀವನವನ್ನು ಕುರಿತು ಇರುವುದರಿಂದ ಅಲ್ಲಿನ ವ್ಯವಸ್ಥೆಯ ಬದಲಾವಣೆಯು ಅವರ ಆಶಯವಾಗಿ ಕಂಡು

ಬರುತ್ತದೆ. ಬಡತನ ದಬ್ಬಾಳಿ ಕ್ರೌರ್ಯಗಳಿಂದ ಸಮಾಜ ಮುಕ್ತವಾಗಬೇಕೆಂದು ಆಶಿಸುತ್ತಾರೆ. ಎಷ್ಟೇ ದೌರ್ಜನ್ಯ ದಬ್ಬಾಳಿಕೆಗಳಿದ್ದರು ಸಮಾಜ ಮುಂದೊಂದುದಿನ ಇವುಗಳಿಂದ ಮುಕ್ತವಾಗುತ್ತದೆ, ಒಳ್ಳೆಯ ದಿನಗಳು ಬಂದೇ ಬರುತ್ತವೆ ಎಂಬಂಥಹ ಆಶಯಗಳನ್ನು ವ್ಯಕ್ತಪಡಿಸುತ್ತಾರೆ. ಇವುಗಳಿಗೆ ಉದಾಹಾರಣೆಯಾಗಿ ಒಂದು ಹಳೆಯ ಚಡ್ಡಿ, ತೋಪು, ಪಟೇಲ ಬಾಳು, ಕಾಳಿ, ಹಬ್ಬ, ತಣಿಗೆ, ಮಿಂಚುಳ, ಮಾಟ, ಬುರುಗಿ ಕಥೆಗಳನ್ನು ಗುರುತಿಸಬಹುದು.

'ಒಂದು ಹಳೇ ಚಡ್ಡಿ' ಕಥೆಯ ಮೂಲಕ ಬಡತನ, ಸಿಟ್ಟು ಹತಾಶೆಗಳನ್ನು ಉಂಟು ಮಾಡಿ ಮುಗ್ಧತೆಯನ್ನು ನಾಶಕ್ಕೆ ಕಾರಣವಾಗುತ್ತದೆ ಎಂಬುದನ್ನು ಚಿತ್ರಿಸುವ ಮೂಲಕ ಬಡತನದ ನಾಶವನ್ನು ಆಶಿಸುತ್ತಾರೆ. 'ಪಟೇಲ' 'ಹಬ್ಬ' 'ತಣಿಗೆ' ಕಥೆಗಳ ಮೂಲಕ ಗ್ರಾಮಗಳು ಉಳಿಯ ಬೇಕೆಂದು ಬಯಸುತ್ತಾರೆ. ಪಟೇಲ ಕಥೆಯಲ್ಲಿ ಆಧುನಿಕತೆಯಿಂದಾಗಿನಗರಗಳ ಬೆಳವಣಿಗೆಯಾಗುತ್ತಿದ್ದು, ಅದು ಹಳ್ಳಿಗಳ ನಾಶಕ್ಕೆ ಕಾರಣವಾಗುತ್ತಿದ್ದು ಹಳ್ಳಿ ಮತ್ತು ನಗರಗಳ ನಡುವೆ ತಮ್ಮ ಉಳಿವಿಗಾಗಿ ಸ್ವರ್ಧೆ ನಡೆಯುತ್ತಿದ್ದು ಆ ಸ್ವರ್ಧೆಯಲ್ಲಿ ಹಳ್ಳಿಯೇ ಕೊನೆಗೆ ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳುತ್ತದೆ ಎಂಬುದನ್ನು ಹಳ್ಳಿಯ ಮತ್ತು ನಗರದ ಮಕ್ಕಳಿಗೆ ನಡೆಯುವ ಆಟದ ಸ್ವರ್ಧೆಯ ಮೂಲಕ ಹಾಗೂ ಆಟದಲ್ಲಿ ಹಳ್ಳಿಯ ಹುಡುಗರು ಗೆಲ್ಲುವುದರ ಮೂಲಕ ಸಾಂಕೇತಿಕವಾಗಿ ತೋರಿಸುತ್ತಾರೆ. ಅವರ ಆಶಯವು ಕೂಡ ಅದೇ ಆಗಿದೆ.

'ತೋಪು' 'ಹಬ್ಬ' 'ತಣಿಗೆ' ಕಥೆಯಲ್ಲಿ ಉದ್ಯೋಗ ಶಿಕ್ಷಣ ಅರಸಿ ನಗರ ಪ್ರದೇಶಕ್ಕೆ ಬಂದರೂ ಮತ್ತೆ ಅವರು ತಮ್ಮ ಹಳ್ಳಿಗೆ ಮರಳಬೇಕಾಗುತ್ತದೆ. ನಗರದಲ್ಲಿ ನೆಮ್ಮದಿ ಇಲ್ಲ ಎಂಬುದನ್ನು ತೋರಿಸಿದ್ದಾರೆ. 'ಹಬ್ಬ' ಕಥೆಯ ನಾಯಕ ನಗರದಲ್ಲಿ ಬದುಕನ್ನು ಕಟ್ಟಿ ಕೊಳ್ಳಲು ಸಾಧ್ಯವಾಗದೆ ವಿಫುಲನಾಗಿ ಮತ್ತೆ ತನ್ನ ಹಳ್ಳಿಗೆ ವಾಪಸ್ಸು ಬರುವುದು, ತೋಪು ಮತ್ತು ತಣಿಗೆ ಕಥೆಯಲ್ಲಿನ ನಾಯಕರು ನಗರ ಜೀವನದ ಬಗ್ಗೆ ಬೇಸರ ವ್ಯಕ್ತಪಡಿಸುವುದು, ನಗರದಲ್ಲಿದ್ದರೂ ಹಳ್ಳಿಯ ಬಗೆಗೆ ಯಾವಾಗಲೂ ಯೋಚಿಸುವುದು ಇವುಗಳ ಮೂಲಕ ಗ್ರಾಮಗಳ ಉಳಿವನ್ನು ಲೇಖಕರು ಆಶಿಸುತ್ತಾರೆ ಎಂದು ಗುರುತಿಸಬಹುದು.

'ಬಾಳು' 'ಮಿಂಚುಳು' 'ತೋಪು' ಈ ಕಥೆಗಳ ಮೂಲಕ ಬದುಕು ಎಷ್ಟೇ ಕಷ್ಟದ್ದಾಗಿದ್ದರೂ ಅದೆಲ್ಲವನ್ನು ಎದುರಿಸಬೇಕು, ದಬ್ಬಾಳಿಕೆಗೆ, ತುಳಿತಕ್ಕೆ ಒಳಗಾದರೂ ಅದರಿಂದ ತಪ್ಪಿಸಿಕೊಂಡು ಬದುಕ ಬೇಕು ಇಂದಲ್ಲದಿದ್ದರೂ ನಾಳೆ ನಮ್ಮ ಬದುಕು

ಚೆನ್ನಾಗಿರುತ್ತದೆ ಎಂಬ ಆಶಯವನ್ನು ವ್ಯಕ್ತಪಡಿಸುತ್ತಾರೆ. 'ತೋಪು' ಕಥೆಯಲ್ಲಿನ ಅವರ ಮಾತುಗಳನ್ನೆ ಗುರುತಿಸಬಹುದು.

"ಇಂದಲ್ಲ ನಾಳೆ, ನಾಳೆಯಲ್ಲ ನಾಡಿದ್ದು, ನಾಡಿದ್ದಲ್ಲ ಆಚೆ ನಾಡಿದ್ದು ಅಥವಾ ಮುಂದೊಂದು ಕಾಲಕ್ಕೆ ಇನ್ನೊಂದು ಯುಗಕ್ಕೆ ಇಲ್ಲವೇ ಇನ್ನೆಂದೋ ಒಂದು ದಿನ ಆ ಒಂದು ದಿನ ಆ ಒಂದು ಕ್ಷಣಕ್ಕಾದರೂ ಇಂತಹ ಎಲ್ಲ ವಿಕೃತಿಗೂ ಒಂದು ಸಮಯ ಬಂದೇ ಬರುತ್ತದೆ. ಎಲ್ಲ ವಿನಾಶಕ್ಕೂ ಒಂದು ಅಂತಿಮ ದಿನವಿರುತ್ತದೆ. ಆವರೆಗೆ ಕಾಯಲು ನನ್ನಿಂದಾಗದಿದ್ದರೂ ಯಾರಾದರೂ ಕಾಯುತ್ತಾರೆ. ಬರಬೇಕಾದವರು ಬಂದೇ ಬರುತ್ತದೆ ಎಂದು ನನ್ನನ್ನು ನಾನೇ ಸಂತೈಸಿಕೊಂಡೆ"

'ಘನತೆ' ಕಥೆಯಲ್ಲಿ ಆಧುನಿಕತೆ ಏನೇ ಮಾಡಿದ್ದರು ಎಲ್ಲವೂ ಅಳಿದು ಒಳ್ಳೆಯ ದಿನಗಳು ಬಂದೇ ಬರುತ್ತವದೆ ಎಂಬ ಆಶಯವನ್ನು, 'ರೈಲು' 'ಬುಗುರಿ' ಕಥೆಗಳ ಮೂಲಕ ಈ ಕ್ರೌರ್ಯ ಪ್ರಪಂಚದಿಂದ ಮುಕ್ತವಾಗ ಬೇಕೆಂಬ ಆಶಯವನ್ನು ವ್ಯಕ್ತಪಡಿಸಿದ್ದಾರೆ.

ಒಟ್ಟಾರೆಯಾಗಿ ಅನ್ಯಾಯ, ದಬ್ಬಾಳಿ, ಎಲ್ಲವೂ ನಾಶವಾಗಿ ಸಂತೋಷದ, ನೆಮ್ಮದಿಯ ಬದುಕು ಪತ್ರಿಯೊಬ್ಬರದೂ ಆಗಬೇಕೆಂಬುದು ಅವರ ಆಶಯವಾಗಿದ್ದು ಅದೇ ರೀತಿಯಲ್ಲಿ ಆಗುತ್ತದೆ ಎಂಬ ಆಶಾ ಮನೋಭಾವನೆ ಕಥೆಗಾರರಲ್ಲಿ ಇರುವುದನ್ನು ನಾವು ಅವರ ಕಥೆಗಳಲ್ಲಿ ಕಾಣಬಹುದು.

# ಅಧ್ಯಾಯ ಏಳು

## ಸಮಾರೋಪ

ಮೊಗಳ್ಳಿ ಗಣೇಶ್ ಅವರ ಕಥೆಗಲ್ಲಿ ಕಂಡುಬರುವ ಕಥಾವಸ್ತುಗಳು ಬಡತನ, ಅಸ್ಪೃಶ್ಯತೆ, ಊಳಿಗಮಾನ್ಯ ವ್ಯವಸ್ಥೆಯಿಂದ ದಲಿತರಿಗೆ ಆಗುವ ಶೋಷಣೆ, ಅನ್ಯಾಯ, ಅವಮಾನ, ಸ್ತ್ರೀಪುರುಷರ ಲೈಂಗಿಕ ಸಂಬಂಧ ಮುಂತಾದ ವಸ್ತುಗಳಿಂದ ಅವರ ದಲಿತ ಸಂವೇದನೆ ಕಂಡು ಬರುತ್ತದೆ. ಲೇಖಕರು ಇಂತಹ ವಸ್ತುಗಳಿಂದ ಅವರು ಸಂಪೂರ್ಣವಾದ ದಲಿತ ಲೋಕವನ್ನು ಅನಾವರಣ ಮಾಡುತ್ತಾರೆ. ಮೇಲಾಜಾತಿಯವರು ಎಷ್ಟೇ ಶೋಷಣೆಯನ್ನು ಮಾಡಿದರೂ ಸಹಿತ ಇವರ ಕಥಾವಸ್ತುವಿನಲ್ಲಿಯ ದಲಿತರು ಒಬ್ಬರೂ ಪ್ರತಿಭಟನೆಯಾಗಲಿ, ಹಿಂಸೆಯಾಗಲಿ ಮಾಡುವುದಿಲ್ಲ. ಯಾಕೆಂದರೆ ಲೇಖಕರು ಅದೊಂದು ದಲಿತ ಸಂಸ್ಕೃತಿ, ದಲಿತ ಜೀವನಪದ್ಧತಿ, ಮತ್ತು ವ್ಯವಸ್ಥೆಯೊಂದರ ವಿಕೃತಿಗಳೆಂದು ಗುರುತಿಸುತ್ತಾ ಹೋಗುತ್ತಾರೆ. ಇಲ್ಲಿಯ ದಲಿತ ವಸ್ತುವಿನಲ್ಲಿ ದಲಿತರು ತಮ್ಮ ಬದುಕನ್ನು ಅನಿವಾರ್ಯವಾಗಿ ಮತ್ತು ತಮ್ಮ ಹಣೆಬರಹವೆ ಅಷ್ಟೇ ಎನ್ನುವ ಹಾಗೆ ಜೀವನ ಮುಂದುವರೆಸುವುದು ಕಂಡು ಬರುತ್ತದೆ.

ಮೊಗಳ್ಳಿ ಗಣೇಶ್ ಅವರು ದಲಿತರ ಬದುಕನ್ನು ತಮ್ಮ ಕಥೆಗಳಲ್ಲಿ ಅನಾವರಣ ಮಾಡಿದ್ದರೂ ಅವರ ಕಥೆಗಳ ಮೇಲೆ ಜನಪದದ ಪ್ರಭಾವವಾಗಿರುವುದನ್ನು ಅವರ ಕಥೆಗಳಲ್ಲಿ ಗುರುತಿಸಬಹುದು. ಜನಪದದ ಕಥೆಗಳನ್ನು ಆಧುನಿಕ ಕಾಲಕ್ಕೆ ಹೊಂದುವಂತೆ ಬದಲಾಯಿಸಿಕೊಂಡು ಕಥೆಗಳನ್ನು ರಚಿಸಿದ್ದಾರೆ. ಹೆಚ್ಚಾಗಿ ಇವರ ಕಥೆಗಳು ಗ್ರಾಮೀಣ ಪರಿಸರದಿಂದ ಪ್ರೇರಣೆಯನ್ನು ಪಡೆದುಕೊಂಡಿವೆ. ಗ್ರಾಮೀಣ ಜೀವನವನ್ನು ತಮ್ಮ ಕಥೆಗಳಲ್ಲಿ ಬಳಸಿಕೊಂಡಿದ್ದಾರೆ.

ಮೊಗಳ್ಳಿಯವರು ಬಳಸಿಕೊಂಡಿರುವ ಭಾಷೆಯು ಕೂಡ ವಿಶಿಷ್ಟವಾಗಿದೆ. ಕಥೆಯ ಮೈಕಟ್ಟು ಕೆಡದಂತೆ ಭಾಷೆಯನ್ನು ದುಡಿಸಿಕೊಂಡಿದ್ದಾರೆ. ಶಿಷ್ಟ ಭಾಷೆ ಮತ್ತು ಗ್ರಾಮೀಣ ಭಾಷೆಗಳ ಜೊತೆಗೆ ಇಂಗ್ಲೀಷ್ ಭಾಷೆಯ ಬಳಕೆ ಕೂಡ ಅವರ ಕಥೆಗಳಲ್ಲಿ ಕಂಡು ಬರುತ್ತದೆ. ಅವಿದ್ಯಾವಂತರು ಮತ್ತು ವಿದ್ಯಾವಂತರು ಮಾತನಾಡುವಾಗ ಬಳಸಿಕೊಂಡಿರುವ ಭಾಷೆಯು ಕೂಡ ಅವರ ಸ್ಥಾನವನ್ನು, ಅವರ ಹಂತಸ್ತನ್ನು ತಿಳಿಸುತ್ತದೆ.

ಮೊಗಳ್ಳಿಯವರು ಕಥೆಗಳನ್ನು ಹೇಳಲು ಬಳಸಿಕೊಂಡಿರುವ ತಂತ್ರ ವಿಭಿನ್ನವಾದ್ದಾಗಿದೆ. ಒಂದೊಂದು ಕಥೆಗಳಿಗೂ ಒಂದೊಂದು ರೀತಿಯ ತಂತ್ರವನ್ನು ಬಳಸಿಕೊಂಡಿದ್ದಾರೆ. ಕಥೆಗಳ ಅಂತ್ಯಗಳೂ ಕೂಡ ಭಿನ್ನವಾದದ್ದು. ಕಥೆಗಾರರು ತಮ್ಮ ಬಾಲ್ಯದಿಂದಲೂ ಅನುಭವಿಸಿದ ಅನುಭವವನ್ನು ಕಥೆಯನ್ನಾಗಿಸಿರುವುದರಿಂದ ಪ್ರತಿಯೊಂದು ವಯಸ್ಸಿನ ಅನುಭವಗಳನ್ನು ಆಯಾ ವಯಸ್ಸಿನ ದೃಷ್ಟಿ ಕೊನಗಳಿಂದ ಕಥೆಗಳನ್ನು ಹೇಳುತ್ತಾರೆ.

ಲೇಖಕರು ಕಥೆಗೆ ಬಳಸಿಕೊಂಡಿರುವ ಶೈಲಿಕೂಡ ವಿಶಿಷ್ಟವಾದ್ದುದ್ದಾಗಿದೆ. ಸಂಭಾಷಣಾತ್ಮಕ ಶೈಲಿಯನ್ನು, ಗದ್ಯ ಪದ್ಯ ಮಿಶ್ರಿತವಾದ ಭಾವಗೀತಾತ್ಮಕ ಶೈಲಿಯನ್ನು ಬಳಸಿಕೊಂಡಿದ್ದಾರೆ. ಆ ಮೂಲಕ ಪಾತ್ರಗಳನ್ನು ಮುಂದುವರಿಸಿ ಕಥೆಯನ್ನು ಹೇಳುತ್ತಾ ಹೋಗುತ್ತಾರೆ. ಕೆಲವುಸಲ ಕಥೆಗಳನ್ನು ಪಾತ್ರಗಳೆ ಆರಂಭ ಮಾಡಿ ಅಂತ್ಯವನ್ನು ಅವುಗಳೇ ಮಾಡುತ್ತವೆ. ಲೇಖಕರ ಶೈಲಿಯ ಮೇಲೆ ಜನಪದದ ಪ್ರಭಾವವಾಗಿರುವುದನ್ನು ಗುರುತಿಸಬಹುದು.

ಮೊಗಳ್ಳಿಯವರು ತಮ್ಮ ಕಥೆಗಳಲ್ಲಿ ಗ್ರಾಮೀಣ ಜೀವನದ ಚಿತ್ರಣವನ್ನು ಕೊಡುತ್ತಾರೆ. ವಾಸ್ತವಕ್ಕೆ ಹೆಚ್ಚು ಪ್ರಾಮುಖ್ಯತೆಯನ್ನು ನೀಡುವ ಕಥೆಗಾರರು ತಮ್ಮ ಕಥೆಗಳಲ್ಲೂ ವಾಸ್ತವವನ್ನು ಚಿತ್ರಿಸಿದ್ದಾರೆ. ಕಲ್ಪನೆಗೆ ಹೆಚ್ಚಿನ ಪ್ರಾಮುಖ್ಯತೆ ನೀಡದೆ ವಾಸ್ತವತೆಗೆ ಹೆಚ್ಚಿನ ಪ್ರಾಧಾನ್ಯತೆಯನ್ನು ನೀಡಿದ್ದಾರೆ. ಜನಪದರ ನಂಬಿಕೆ, ಆಚರಣೆ, ಹಬ್ಬಗಳನ್ನು ತಮ್ಮ ಕಥೆಗಳಲ್ಲಿ ಬಳಕೆಮಾಡಿಕೊಂಡಿದ್ದಾರೆ. ಹಬ್ಬಗಳನ್ನು ಆಚರಣೆಗಳನ್ನು ಹೇಳುವುದರ ಮೂಲಕವೇ ಅವರ ಬದುಕನ್ನು ಅನಾವರಣ ಮಾಡಿದ್ದಾರೆ. ಆ ಮೂಲಕ ಮನುಷ್ಯನಲ್ಲಿರುವು ದ್ವೇಷ, ಸೇಡು, ಸ್ವಾರ್ಥ, ರಾಜಕೀಯ, ಅನ್ಯಾಯ, ದಬ್ಬಾಳಿಕೆಗಳನ್ನು, ಸ್ತ್ರೀಯರ ಮೇಲೆ ನಡೆಯುತ್ತಿರುವ ದೌರ್ಜನ್ಯವನ್ನು ಬಿಚ್ಚಿಡುತ್ತಾ ಹೋಗುತ್ತಾರೆ.

ಆಧುನಿಕತೆಯಿಂದಾಗಿ ಮನುಷ್ಯ ಏಕಾಂಗಿಯಾಗುತ್ತಿದ್ದಾನೆ. ತನ್ನವರನ್ನು ಬಿಟ್ಟು ಒಚಿಟಿಯಾಗಿ ಬದುಕುತ್ತಿದ್ದಾನೆ ಇದರ ಪರಿಣಾಮವಾಗಿ ಬದುಕಿನಲ್ಲಿ ಸ್ವಾರಸ್ಯತೆ ಎಂಬುದಿಲ್ಲ. ಇದರ ಜೊತೆಗೆ ಜಾನಪದವು ತನ್ನ ಅಸ್ಥಿತ್ವವನ್ನು ಕೆಳೆದು ಕೊಳ್ಳುತ್ತಿದೆ. ಇಂದಿನ ಒತ್ತಡದ ಬದುಕಿನ್ನಲ್ಲಿ ಮನುಷ್ಯನಿಗೆ ಮನರಂಜನೆ ಅಗತ್ಯವಾಗಿದೆ ಎಲ್ಲಕ್ಕಿಂತ ಮುಖ್ಯವಾಗಿ ಮನುಷ್ಯ ತನ್ನ ಅಸ್ಥಿತ್ವವನ್ನು ಉಳಿಸಿಕೊಳ್ಳ ಬೇಕಾದ ಅಗತ್ಯವಿದೆ.

ಮೊಗಳ್ಳಿ ಗಣೇಶ್ ಅವರು ತಮ್ಮ ಕಥೆಗಳಲ್ಲಿ ಜಗತ್ತಿನ ಬದಲಾವಣೆಗಳನ್ನು ಬಯಸುತ್ತಾರೆ. ಆಧುನಿಕತೆಯನ್ನು ಬಯಸುತ್ತಾ ವಿಜ್ಞಾನ ಮತ್ತು ತಂತ್ರಜ್ಞಾನ ಬೆಳವಣಿಗೆಯನ್ನು ಬಯಸುತ್ತಾರೆ. ವಿಜ್ಞಾನ ಮತ್ತು ತಂತ್ರಜ್ಞಾನ ಬೆಳೆದಂತೆ ಹಳ್ಳಿಯ ಅಭಿವೃದ್ಧಿಯಾಗಿ ಪ್ರತಿಯೊಬ್ಬ ಮನುಷ್ಯನ ಬದುಕು ಉತ್ತಮ್ಮವಾಗುತ್ತದೆ ಎಂಬ ಅಭಿಪ್ರಾಯ ಲೇಖಕರದು. ದಲಿತರ ಬದುಕು ಬದಲಾಗಬೇಕು ಅವರು ಉತ್ತಮವಾದಂತಹ ಜೀವನ ನಡೆಸಬೇಕು ಎಂಬ ಆಶಯವನ್ನು ಹೊಂದಿದ್ದಾರೆ.

ವಿಜ್ಞಾನ ಮತ್ತು ತಂತ್ರಜ್ಞಾನ ಬೆಳೆದಂತೆ ಆರ್ಥಿಕ ಅಭಿವೃದ್ಧಿಯಾಗುತ್ತದೆ. ಇದರಿಂದ ದಲಿತರ ಬದುಕು ಅರಳುತ್ತದೆ ಎಂಬ ಕಾರಣಕ್ಕೆ ವಿಜ್ಞಾನ ಮತ್ತು ತಂತ್ರಜ್ಞಾನದ ಬೆಳವಣಿಗೆಯನ್ನು ಬಯಸುತ್ತಾರೆ. ಆದರೆ ಹಳ್ಳಿಗಳ ನಾಶಕ್ಕೆ ಕಾರಣವಾಗುವ ಅಭಿವೃದ್ಧಿಯನ್ನು ವಿರೋಧಿಸುತ್ತಾರೆ. ಹಳ್ಳಿಗಳ ನಾಶದಿಂದಗಾಗಿ ನಾವು ನಮ್ಮ ತನವನ್ನು ಕಳೆದುಕೊಳ್ಳುತ್ತೇವೆ ಎಂಬುದು ಅವರ ಅಭಿಪ್ರಾಯ.

ಹಳ್ಳಿಗಳ ಬದಲಾವಣೆಯನು ಬಯಸುತ್ತಾರೆಯೇ ಹೊರತು ಹಳ್ಳಿಗಳ ನಾಶವನ್ನು ಬಯಸುವುದಿಲ್ಲ. ಪ್ರತಿಯೊಬ್ಬ ವ್ಯಕ್ತಿಗೂ ಸ್ವತಂತ್ರ, ಸಮಾನತೆ, ಹಕ್ಕುಗಳು ಸಿಗಬೇಕೆಂದು ಬಯಸುತ್ತಾರೆ.

ಒಟ್ಟಾರೆಯಾಗಿ ಮೊಗಳ್ಳಿ ಗಣೇಶ್ ಅವರು ತಮ್ಮ ಕಥೆಗಳಲ್ಲಿ ದಲಿತರ ಬದುಕನ್ನು ಚಿತ್ರಿಸುತ್ತಾ ಅವರ ನೋವು, ನಲಿವುಗಳನ್ನು ಹೇಳುತ್ತಾ ಅವರ ಬದುಕು ಬದಲಾಗಬೇಕೆಂದು ಬಯಸುತ್ತಾರೆ. ತಮ್ಮ ಕಥೆಗಳನ್ನು ಜನಪದದ ಹಿನ್ನೆಲೆಯಲ್ಲಿ ರಚಿಸುವುದರ ಮೂಲಕ ಜನಪದವನ್ನು ಉಳಿಸಿಕೊಳ್ಳಬೇಕೆಂಬ ಆಶಯವನ್ನು ಇಟ್ಟುಕೊಂಡಿದ್ದಾರೆ.

# ಅಧ್ಯಾಯ ಎಂಟು

## ಗ್ರಂಥ ಋಣ.

೧. ಅರವಿಂದ ಮಾಲಗತ್ತಿ : ಸಂಸ್ಕೃತಿ ಮತ್ತು ದಲಿತ ಪ್ರಜ್ಞೆ, ಕನ್ನಡ ಸಾಹಿತ್ಯ ಪರಿಷತ್ತು, ೨೦೦೩.

೨. ಅರವಿಂದ ಮಾಲಗತ್ತಿ : ದಲಿತಮಾರ್ಗ, ಕನ್ನಡ ಪುಸ್ತಕ ಪ್ರಾಧಿಕಾರ ಬೆಂಗಳೂರು, ೨೦೦೨

೩. ಆಮೂರ. ಜಿ. ಎಸ್. : ಕನ್ನಡ ಕಥನ ಸಾಹಿತ್ಯ ಸಣ್ಣಕತೆ, ಪ್ರಿಯದರ್ಶಿನಿ ಪ್ರಕಾಶನ ಬೆಂಗಳೂರು, ೨೦೦೩.

೪. ಆಮೂರ. ಜಿ. ಎಸ್. ಸಂ : ಸ್ವಾತಂತ್ರ್ಯೋತ್ತರ ಕನ್ನಡ ಕಥಾಲೋಕ, ಅಂಕಿತ ಪುಸ್ತಕ, ಬೆಂಗಳೂರು, ೨೦೦೪.

೫. ಕಾಳೇಗೌಡ ನಾಗವಾರ : ತ್ರಿಪದಿ,ರಗಳೆ ಮತ್ತು ಜನಪದ ಸಾಹಿತ್ಯ(ಸಾಮಾನ್ಯನಿಗೆ ಸಾಹಿತ್ಯ ಚರಿತ್ರೆ ೭), ಸ್ವಪ್ನ ಬುಕ್ ಹೌಸ್ ಬೆಂಗಳೂರು, ೧೯೭೫.

೬.ಗಂಜ್ಯಾಳ ಬೋರಮ್ಮ ಬಸವಂತ್ರಾಯ : ಮೊಗಳ್ಳಿ ಕಥನ : ದಲಿತತ್ವದ ಶೋಧ, ಸಂಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭-೦೮.

೭. ಗಿರಡ್ಡಿ ಗೋವಿಂದರಾಜ : ಸಣ್ಣ ಕತೆಯ ಹೊಸ ಒಲವುಗಳು, ಸಾಹಿತ್ಯ ಭಂಡಾರ, ೯. ಹುಬ್ಬಳ್ಳಿ, ೧೯೬೫.

೮. ಗಿರಡ್ಡಿ ಗೋವಿಂದರಾಜ : ಸಮಗ್ರ ವಿಮರ್ಶೆ, ಸಪ್ನ ಬುಕ್ ಹೌಸ್, ಬೆಂಗಳೂರು, ೨೦೦೧.

೯. ಡಾ. ಚಂದ್ರಶೇಖರ. ಟಿ. ಆರ್. : ದಲಿತ ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೫.

೧೦. ಚಂದ್ರಶೇಖರ. ಕಂಬಾರ : ದೇಶೀಯ ಚಿಂತನೆ, ಅಂಕಿತ ಪುಸ್ತಕ, ಬೆಂಗಳೂರು, ೨೦೦೪.

೧೧. ತೇಜಸ್ವಿನಿ ನಿರಂಜನ, ಸೀಮಂತಿನಿ ನಿರಂಜನ. ಸಂ. : ಸ್ತ್ರೀವಾದಿ ಸಾಹಿತ್ಯ ವಿಮರ್ಶೆ, ಕನ್ನಡ ಸಂಘ, ಕ್ರೈಸ್ಟ್ ಕಾಲೇಜು, ಬೆಂಗಳೂರು, ೧೯೯೪.

೧೨. ನಾಗಭೂಷಣ ಸ್ವಾಮಿ. ಓ. ಎಲ್. : ವಿಮರ್ಶೆಯ ಪರಿಭಾಷೆ, ಅಂಕಿತ ಪುಸ್ತಕ ಬೆಂಗಳೂರು ೧೯೯೧.

೧೩. ಡಾ. ನಿಂಗಣ್ಣ. ಚಿ.ಸಿ. : ಕನ್ನಡ ಸಾಹಿತ್ಯ ಸಂಸ್ಕೃತಿ ಕೋಶ, ಶ್ರೀ. ಸಿದ್ದಲಿಂಗೇಶ್ವರ ಪ್ರಕಾಶನ, ಗುಲಬರ್ಗಾ, ೨೦೦೮.

೧೪. ನೀಲಾ ಪಾಟೀಲ (ಸಂಕಲನ) : ಕನ್ನಡ ಸಾಹಿತಿಗಳ ಮಾಹಿತಿ, ಸಂಕ್ರಮಣ ಪ್ರಕಾಶನ ಬೆಂಗಳೂರು, ೨೦೦೩.

೧೫. ಬರಗೂರು ರಾಮಚಂದ್ರಪ್ಪ : ಪರಂಪರೆಯೊಂದಿಗೆ ಪಿಸುಮಾತು, ಅಂಕಿತ ಪುಸ್ತಕ, ಬೆಂಗಳೂರು, ೨೦೦೪.

೧೬. ಬಸವರಾಜ ಕಲ್ಗುಡಿ : ಬಹುಮುಖಿ–೬, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೨೦೦೯.

೧೭. ಭಂಡಾರಿ. ಆರ್. ವಿ. : ವರ್ಣದಿಂದ ವರ್ಗದ ಕಡೆಗೆ, ಕನ್ನಡ ಪುಸ್ತಕ ಪ್ರಾಧಿಕಾರ ಬೆಂಗಳೂರು, ೨೦೦೩.

೧೮. ಡಾ. ಮಹದೇವಯ್ಯ ಪಿ. ಸಂ : ದಲಿತರು ಭಾಷೆ ಮತ್ತು ಸಮಾಜ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬.

೧೯. ಮೊಗಳ್ಳಿ ಗಣೇಶ್ : ಕಥನ, ಸಿ.ವಿ.ಜಿ. ಪಬ್ಲಿಕೇಷನ್ಸ, ಬೆಂಗಳೂರು, ೧೯೯೮.

೨೦. ಮೊಗಳ್ಳಿ ಗಣೇಶ್ : ದೇಶಿ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭.

೨೧. ಮೊಗಳ್ಳಿ ಗಣೇಶ್ : ಬುಗುರಿ, ಪತ್ರಿಕೆ ಪ್ರಕಾಶನ, ಬೆಂಗಳೂರು, ೧೯೯೨.

೨೨. ಮೊಗಳ್ಳಿ ಗಣೇಶ್ : ಭೂಮಿ, ಪ್ರಸಮ್ ಬುಕ್ ಹೌಸ್, ಬೆಂಗಳೂರು, ೨೦೦೧.

೨೩. ಮೊಗಳ್ಳಿ ಗಣೇಶ್ : ಮಣ್ಣು, ಸ್ವಪ್ನ ಬುಕ್ ಹೌಸ್, ಬೆಂಗಳೂರು, ೨೦೦೫.

೨೪. ಮೊಗಳ್ಳಿ ಗಣೇಶ್ : ಮೊಗಳ್ಳಿ ಕಥೆಗಳು, ಸ್ವಪ್ನ ಬುಕ್ ಹೌಸ್, ಬೆಂಗಳೂರು, ೨೦೦೮.

೨೫. ಮೊಗಳ್ಳಿ ಗಣೇಶ್ : ಮೌಖಿಕ ಕಥನ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬.

೨೬. ಮೊಗಳ್ಳಿ ಗಣೇಶ್ : ಶತಮಾನ, ಲೋಹಿಯಾ ಪ್ರಕಾಶನ, ಬಳ್ಳಾರಿ. ೨೦೦೦.

೨೭. ರಾಜಪ್ಪ ದಳವಾಯಿ : ಕನ್ನಡ ಸಾಹಿತ್ಯ ಕೋಶ, ಶ್ರೀ ರಾಘವೇಂದ್ರ ಪ್ರಕಾಶನ, ಬೆಂಗಳೂರು, ೧೯೯೬.

೨೮. ಲಿಂಗಯ್ಯ.ಡಿ. ಸಂ. : ಕನ್ನಡ ಜನಪದ ಕಥೆಗಳು, ಕರ್ನಾಟಕ ಜಾನಪದ ಪರಿಷತ್ತು, ಬೆಂಗಳೂರು, ೨೦೦೮.

೨೯. ಲಿಂಗಯ್ಯ.ಡಿ. ಸಂ. : ಮಣ್ಣಿನ ಮಿಡಿತ ಜನಪದ ಕತೆಗಳ ಸಂಕಲನ, ದಿನಕರ ಪ್ರಕಾಶನ, ಬೆಂಗಳೂರು. ೧೯೬೯.

೩೦. ಪ್ರೊ. ಶೇಷಗಿರಿ ರಾವ್. ಎಲ್. ಎಸ್. : ಹೊಸಗನ್ನಡ ಸಾಹಿತ್ಯ ಚರಿತ್ರೆ(ಸಾಮಾನ್ಯನಿಗೆ ಸಾಹಿತ್ಯ ಚರಿತ್ರೆ ೧೦), ಸಪ್ನ ಬುಕ್ ಹೌಸ್, ಬೆಂಗಳೂರು. ೧೯೭೫.

೩೧. ಡಾ. ಸಿದ್ಧಲಿಂಗಯ್ಯ. : ಉರಿಕಂಡಯ್ಯ, ಅಂಕಿತ ಪುಸ್ತಕ, ಬೆಂಗಳೂರು, ೨೦೦೯.

೩೨. ಡಾ. ಸುಮಿತ್ರಾಬಾಯಿ. ಬಿ. ಎನ್. : ಸ್ತ್ರೀವಾದ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು. ೧೯೯೯.

೩೩. ಡಾ. ಹಳ್ಳಿಕೇರಿ. ಎಫ್.ಟಿ., ಡಾ. ರವೀಂದ್ರನಾಥ. ಕೆ. ಸಂ. : ದಶಕದ ಕನ್ನಡ ಸಾಹಿತ್ಯ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨.

೩೪. ಹನುಮಂತಯ್ಯ. ಎಲ್. ಕಥಾ ಕಥನ, ಸಿ.ವಿ.ಜಿ. ಬೆಂಗಳೂರು, ೧೯೯೯.

೩೫. ಹೊನ್ನಯ್ಯ. ಸಿ.ಬಿ. : ಕನ್ನಡ ಸಣ್ಣಕತೆಗಳಲ್ಲಿ ದಲಿತ ಸಂಸ್ಕೃತಿ ಕೆ. ಎಸ್. ಮುದ್ದಪ್ಪ ಸ್ಮಾರಕ ಟ್ರಸ್ಟ್ ಬೆಂಗಳೂರು, ೨೯೯೪.